# ಎಸ್. ಕಾಳಪ್ಪ

# S. Kalappa


ಪೀಟರ್ ಲೂಯಿಸ್
ಪ್ರಧಾನ ಸಂಪಾದಕರು

ಎಲ್. ಶಿವಲಿಂಗಪ್ಪ
ಲೇಖಕರು





ಕರ್ನಾಟಕ ಲಲಿತಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**S. Kalappa** - A monograph by Sri L. Shivalingappa; Principal, Kalavidyalaya, Basavanagara, Bangalore-560 037 and Published by Shri B.T. Munirajaiah, Registrar, Karnataka Lalithakala Academy, Kannada Bhavana, J.C. Road, Bangalore - 560 002. Tel: 080-22480297





First Edition: 2004
English version by Shri Venkataraman.

Pages: 48+8

Price: **Rs. 40/-**



ಮುಖಚಿತ್ರ: ಎಸ್. ಕಾಳಪ್ಪ ಅವರು ರಚಿಸಿದ ಭಾವಚಿತ್ರ
ವಿನ್ಯಾಸ: ಶ್ರೀ ಸುಧಾಕರ ದರ್ಬೆ

ಮುದ್ರಕರು: ಪರಿಶ್ರೀ ಪ್ರಿಂಟರ್ಸ್
100/3, ನಾಗಪ್ಪ ಸ್ಟ್ರೀಟ್,
ಪ್ಯಾಲೇಸ್ ಗುಟ್ಟಹಳ್ಳಿ, ಬೆಂಗಳೂರು-560 003
ದೂರವಾಣಿ: 080-23368286

## ಅಧ್ಯಕ್ಷರ ಮಾತು

ಲಲಿತಕಲಾ ಅಕಾಡೆಮಿಯ ಅಧ್ಯಕ್ಷನಾಗಿ ಮೂರು ವರ್ಷಗಳಾಗುತ್ತಿದೆ. ಈ ಅವಧಿಯಲ್ಲಿ ನಾನು ಮತ್ತು ಸದಸ್ಯರ ತಂಡ ರೂಪಿಸಿ, ನಿರ್ವಹಿಸಿದ ಕಾರ್ಯಕ್ರಮಗಳನ್ನು ನಿಮ್ಮ ಮುಂದಿಡುವುದು ನನ್ನ ಜವಾಬ್ದಾರಿ ಹಾಗೂ ಸಂತೋಷದ ವಿಷಯ. ನಾವು ಮೂರು ವರ್ಷಗಳ ಕಾರ್ಯಕ್ರಮಗಳನ್ನು ರೂಪಿಸುವಾಗ ಯುವ ಪೀಳಿಗೆಗೆ ಸಿಂಹಪಾಲು ನೀಡಿದ್ದೇವೆ, ಹೊಸತನವನ್ನೂ ಕಾಪಾಡಿಕೊಂಡಿದ್ದೇವೆ.

'ಯಂಗ್ ಸ್ಟ್ರೋಕ್ಸ್', 'ನಿಮ್ಮೊಂದಿಗೆ ನಾವು', 'ಮನೆಗೊಂದು ಕಲಾಕೃತಿ', 'ಜನಪದ ಕೃತಿ-ಆಧುನಿಕ ಕೃತಿ', ಯುವಕಲಾವಿದರಿಗೆ ಫೆಲೋಶಿಪ್ ಮುಂತಾದ ನವೀನ ಹಾಗೂ ಉಪಯುಕ್ತ ಕಾರ್ಯಕ್ರಮಗಳನ್ನು ರೂಪಿಸಿದ್ದೇವೆ. ಕರ್ನಾಟಕವನ್ನು ನಾಲ್ಕು ವಿಭಾಗಗಳಾಗಿ ಮಾಡಿ, ಪ್ರತಿ ಕಾರ್ಯಕ್ರಮದಲ್ಲಿ ನಾಲ್ಕೂ ವಿಭಾಗದ ಕಲಾವಿದರಿಗೆ ಸಮಪಾಲು ದೊರಕುವಂತೆ ಮಾಡಿದ್ದು ಕಲಾವಿದರಿಗೆ ಸಂತಸ ತಂದಿದೆ.

ಈ ಎಲ್ಲಾ ಕಾರ್ಯಕ್ರಮಗಳು ಯುವಶಕ್ತಿಯ ಪಾಲಾದರೆ, ಚಿತ್ರದುರ್ಗದ ಸಾಣೆಹಳ್ಳಿಯಲ್ಲಿ ಹಿರಿಯ ಕಲಾವಿದರ ಶಿಬಿರ, ಬೆಂಗಳೂರಿನಲ್ಲಿ ಕಲಾವಿದೆಯರ ಶಿಬಿರ, ಬೆಂಗಳೂರು ಹಾಗೂ ಗುಲ್ಬರ್ಗಾದಲ್ಲಿ ಗ್ರಾಫಿಕ್ ಶಿಬಿರವನ್ನು ನಡೆಸಿದ್ದೇವೆ. ಶ್ರೀ ಜಿ. ಎಸ್. ದಂಡಾವತಿಮಠ ಹಾಗೂ ಡಾ|| ಎಂ.ವಿ. ಮಿಣಜಿಗಿಯವರ ಶತಮಾನೋತ್ಸವ ಕಾರ್ಯಕ್ರಮಕ್ಕೂ ಪರೋಕ್ಷವಾಗಿ ನಾವು ಕಾರಣಕರ್ತರಾಗಿದ್ದೇವೆ.

ಇದರೊಂದಿಗೆ ವಾರ್ಷಿಕ ಕಲಾಪ್ರದರ್ಶನ, ವಾರ್ಷಿಕ ಪ್ರಶಸ್ತಿ ಸಮಾರಂಭ, ಜಿಲ್ಲಾವಾರು ಕಲಾಶಿಬಿರ, ಏಕವ್ಯಕ್ತಿ ಹಾಗೂ ಸಮೂಹ ಕಲಾಪ್ರದರ್ಶನಗಳಿಗೆ ಧನಸಹಾಯ ಮುಂತಾದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯಕ್ರಮ, ಐಫಾಕ್ಸ್ ಕಲಾಪ್ರದರ್ಶನಗಳಿಗೆ ಸಹಯೋಗ ನೀಡಿದ್ದೇವೆ.

ಹಿರಿಯ ಕಲಾವಿದರಿಗೆ ನೀಡುವ ವಾರ್ಷಿಕ ಪ್ರಶಸ್ತಿಯ ಜೊತೆಗೆ ಕಲಾಕ್ಷೇತ್ರದ ಅಭಿವೃದ್ಧಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ ಚೇತನಗಳಿಗೆ ವಾರ್ಷಿಕ ಪುರಸ್ಕಾರವನ್ನು ನೀಡಿ ಗೌರವಿಸುವುದನ್ನು ಪ್ರಾರಂಭಿಸಿದ್ದೇವೆ. ಈ ವರ್ಷ ವಾರ್ಷಿಕ ಕಲಾ ಪ್ರದರ್ಶನದಲ್ಲಿ ನೀಡಿದ ಬಹುಮಾನಗಳನ್ನು ಹಿರಿಯ ಕಲಾವಿದರ ಹೆಸರಿನಲ್ಲಿ ನೀಡುವುದರೊಂದಿಗೆ ಅವರನ್ನು ಸ್ಮರಿಸಿದ್ದೇವೆ.

ಇಷ್ಟೆಲ್ಲಾ ಆದರೂ ಮನಸ್ಸಿನಲ್ಲಿ ಕೊರತೆ ಕಾಡುತ್ತಿದೆ. ರಾಷ್ಟ್ರಮಟ್ಟದ ಕಲಾಶಿಬಿರ, ರಾಷ್ಟ್ರಮಟ್ಟದ ವಿಚಾರಗೋಷ್ಠಿ, ಕಲಾಕೃತಿಗಳ ಮಾರಾಟ ಕೇಂದ್ರ, ಹಾಸನದಲ್ಲಿ ರಾಷ್ಟ್ರೀಯ ಕಲಾಗ್ರಾಮ, ವಿಭಿನ್ನ ಶೈಲಿಯ ಭಾವಚಿತ್ರದ ಶಿಬಿರವನ್ನು ಈ ಅವಧಿಯಲ್ಲಿ ನಡೆಸಲಾಗದಿದ್ದುದಕ್ಕೆ ನಮ್ಮ ಮನಸ್ಸುಗಳಲ್ಲಿ ಇನ್ನೂ ಅತೃಪ್ತಿ ಕಾಡುತ್ತಿದೆ.

ಕರ್ನಾಟಕ ಲಲಿತಕಲಾ ಅಕಾಡೆಮಿಯ ಹತ್ತು ಹಲವು ಕಾರ್ಯಕ್ರಮಗಳಲ್ಲಿ ಪುಸ್ತಕ ಪ್ರಕಟಣಾ ಯೋಜನೆಯೂ ಒಂದು. ಅದರ ಅಂಗವಾಗಿ ಪ್ರತಿ ಮೂರು ತಿಂಗಳಿಗೊಮ್ಮೆ **'ಕಲಾವಾರ್ತೆ'** ಎಂಬ ಸಂಚಿಕೆಯನ್ನು ಅಕಾಡೆಮಿ ನಿಯಮಿತವಾಗಿ ಪ್ರಕಟಿಸುತ್ತ ಬಂದಿದೆ. ಮುದ್ರಣ ಹಾಗೂ ವಿನ್ಯಾಸಗಳಲ್ಲಿ ಕಲಾತ್ಮಕತೆಗೆ ಒತ್ತುಕೊಟ್ಟು, ಕಲಾವಾರ್ತೆಯನ್ನು ವಾರ್ತಾ ಸಂಚಿಕೆಯಾಗಿಸದೆ ಸಂಗ್ರಹಯೋಗ್ಯ ಸಂಚಿಕೆಯನ್ನಾಗಿಸಿದ್ದೇವೆ. **ಕಲಾವಿದರ ಮಾಲಿಕೆಯಲ್ಲಿ** ಒಂಬತ್ತು ಜನ ಹಿರಿಯ ಕಲಾವಿದರಾದ ಕೆ. ಕೇಶವಯ್ಯ, ಎಸ್. ಕಾಳಪ್ಪ, ಎಚ್.ಎಸ್. ಇನಾಮತಿ, ರಘೋತ್ತಮ ಪುಟ್ಟಿ, ವ್ಹಿ.ಟಿ. ಕಾಳೆ, ಪುರುಷೋತ್ತಮ ಕಾರಂತ, ಎಂ.ಆರ್. ಬಾಳೀಕಾಯಿ, ವ್ಹಿ.ಜಿ. ಅಂದಾನಿ ಹಾಗೂ ಸಿ. ಚಂದ್ರಶೇಖರ್ ಅವರುಗಳ ಜೀವನ ಸಾಧನೆಗಳ ಪುಸ್ತಕಗಳು ಸಿದ್ಧಗೊಂಡಿವೆ. ಇವರಲ್ಲಿ ಮೂವರು ಕಲಾವಿದರು ಇಂದು ಇಲ್ಲವಾಗಿದ್ದಾರೆ. ಅವರ ಬಗ್ಗೆ ಮಾಹಿತಿ ಸಂಗ್ರಹಿಸುವುದು ಅತ್ಯಂತ ದುಸ್ತರ ಕಾರ್ಯವಾಗಿದ್ದು, ಆಯಾ ಲೇಖಕರು ಈ ಕಾರ್ಯವನ್ನು ಸಾಹಸವೆಂಬಂತೆ ತೆಗೆದುಕೊಂಡು ಬರೆದಿದ್ದಾರೆ. ಉಳಿದ ಲೇಖಕರು ತಮ್ಮ ಲೇಖನದ ಕಲಾವಿದರನ್ನು ಅನೇಕ ಬಾರಿ ಸಂಪರ್ಕಿಸಿ, ಸಂದರ್ಶಿಸಿ ಅಭ್ಯಾಸ ಪೂರ್ಣವಾಗಿ ಬರೆದಿದ್ದಾರೆ. ಈ ಎಲ್ಲ ಬರಹಗಾರರಿಗೆ ಮತ್ತು ಅದನ್ನು ಸಂಪಾದಿಸಿಕೊಟ್ಟ ಡಾ|| ಅ.ಲ. ನರಸಿಂಹನ್ ಅವರಿಗೆ ಅಕಾಡೆಮಿ ಪರವಾಗಿ ಧನ್ಯವಾದಗಳು. ಕರ್ನಾಟಕದ ಎಲ್ಲ ಜಿಲ್ಲೆಗಳ ಸಮಗ್ರ ಚಿತ್ರಕಲೆಯ ಸ್ಥೂಲನೋಟವನ್ನು ಒಂದೆಡೆಗೆ ತರುವ ಉದ್ದೇಶದಿಂದ **ಕರ್ನಾಟಕ ಚಿತ್ರಕಲಾ ದರ್ಶನ** ಎಂಬ ಬೃಹತ್ ಸಂಪುಟವನ್ನು ತರುತ್ತಿದ್ದು, ಅದಕ್ಕೆ ಹೆಚ್ಚಿನ ಅನುದಾನಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. **ಜನಪ್ರಿಯ ಕಲಾಮಾಲೆಯ** ಅಡಿಯಲ್ಲಿ ಕರ್ನಾಟಕದ ದೇಶಿ ಚಿತ್ರಕಲೆಯನ್ನು ಪ್ರಾದೇಶಿಕ ವೈಶಿಷ್ಟ್ಯತೆಯ ಹಿನ್ನೆಲೆಯಲ್ಲಿ ಪರಿಚಯಿಸುವ ಹತ್ತು ಪುಸ್ತಕಗಳನ್ನು ತಜ್ಞ ವಿದ್ವಾಂಸರಿಂದ ಬರೆಯಿಸಿ ಇದೀಗ ಪ್ರಕಟಿಸುತ್ತಿದ್ದೇವೆ. ಅವುಗಳನ್ನು ಸುಂದರವಾಗಿ ಸಂಪಾದಿಸಿ ಕೊಟ್ಟ ಅಕಾಡೆಮಿಯ ಸದಸ್ಯರಾದ ಸಂಶೋಧಕ ಡಾ|| ಎಸ್.ಸಿ. ಪಾಟೀಲರು. ಅವರಿಗೆ ಅಕಾಡೆಮಿಯ ಪರವಾಗಿ ವಂದನೆಗಳು. ಅಕಾಡೆಮಿಯ ಇನ್ನೊಂದು ಗ್ರಂಥ ಭಾವಚಿತ್ರ ಪರಂಪರೆಯ **'ಮುಖಗಳೊಂದಿಗೆ ಮುಖಾಮುಖಿ'** ಅಧ್ಯಯನ ಯೋಗ್ಯ ಕೃತಿಯನ್ನು ನಮ್ಮ ಮನವಿಯಂತೆ ಬರೆದುಕೊಟ್ಟಿರುವ ವಿಮರ್ಶಕರಾದ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ರವರಿಗೆ ಅಕಾಡೆಮಿಯ ಪರವಾಗಿ ವಂದನೆಗಳು. ಇದಲ್ಲದೆ ಇಪ್ಪತ್ತು ಹಿರಿಯ-ಕಿರಿಯ ಕಲಾವಿದರ ಕಲಾಕೃತಿಗಳ ಚಿತ್ರಸಂಪುಟವೊಂದು ಅಕಾಡೆಮಿ ಸದಸ್ಯ ಶ್ರೀ ಪ.ಸ. ಕುಮಾರ್ ಅವರ ಸಂಪಾದಕತ್ವದಲ್ಲಿ ಬರುತ್ತಿದೆ.

ನಾವು ಮೂರು ವರ್ಷಗಳಲ್ಲಿ ಮಾಡಿದ ಕಾರ್ಯಕ್ರಮಗಳ ಪಟ್ಟಿಯನ್ನು ವಾರ್ಷಿಕ ವರದಿಯಲ್ಲಿ ನೀಡುತ್ತಿದ್ದೇವೆ. ಎಲ್ಲಾ ಕಾರ್ಯಕ್ರಮಗಳಲ್ಲೂ ನಮ್ಮೊಡನೆ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕೇಂದ್ರ ಲಲಿತಕಲಾ ಅಕಾಡೆಮಿ, ರೀಜನಲ್ ಸೆಂಟರ್ ಚೆನ್ನೈ, ಐಫಾಕ್ಸ್ ಸಂಸ್ಥೆಗಳಿಗೆ ನಮ್ಮ ವಂದನೆಗಳು.

ನನ್ನೊಡನೆ ಇದುವರೆಗೂ ಸಹಕರಿಸಿ ಉಪಯುಕ್ತ ಸಲಹೆಗಳನ್ನು ನೀಡಿದ ಸದಸ್ಯ ಮಿತ್ರರೆಲ್ಲರಿಗೂ ನನ್ನ ಇಡೀ ತಂಡದ ಪರವಾಗಿ ಹಾಗೂ ವೈಯಕ್ತಿಕವಾಗಿ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ. ವಿಶೇಷವಾಗಿ ಸಮನ್ವಯಕಾರರಾಗಿ ಹಲವಾರು ಕಾರ್ಯಕ್ರಮಗಳನ್ನು ಆಗುಮಾಡಿದ ಸದಸ್ಯ ಶ್ರೀ ಪ.ಸ.ಕುಮಾರ್ ಅವರಿಗೆ ನನ್ನ ಕೃತಜ್ಞತೆಗಳು. ಈ ಎಲ್ಲ ಪ್ರಕಟಣೆಗಳೂ ವಿವಿಧ ಮುದ್ರಣಾಲಯಗಳಲ್ಲಿ ರೂಪತಳೆದಿದ್ದು, ಅವುಗಳ ಮಾಲೀಕರಿಗೆ, ಮುಖಚಿತ್ರವನ್ನು ಕಲಾಕೃತಿಯೆಂಬಂತೆಯೇ ರಚಿಸಿಕೊಟ್ಟ ಶ್ರೀ ಸುಧಾಕರ ದರ್ಬೆ ಅವರಿಗೆ, ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಬಿ.ಟಿ. ಮುನಿರಾಜಯ್ಯ ಮತ್ತು ಸಿಬ್ಬಂದಿ ವರ್ಗದ ರಾಜು, ವೆಂಕಟೇಶ್, ಗಂಗಾಧರ, ಮುತ್ತು, ಬಾಲು, ಲೋಕೇಶ ಮತ್ತು ಅರವಿಂದ ಅವರುಗಳಿಗೆ ಹಾಗೂ ಪ್ರತ್ಯಕ್ಷ , ಪರೋಕ್ಷವಾಗಿ ಬೆಂಬಲ ನೀಡಿದ ಮಹನೀಯರಿಗೆಲ್ಲಾ ನಮ್ಮ ಧನ್ಯವಾದಗಳು.

ನಮ್ಮ ಈ ಕಿರು ಪ್ರಯತ್ನಗಳನ್ನು ಕಲಾವಿದರು, ಸಹೃದಯ ಕಲಾಸಕ್ತರು ತುಂಬು ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

**ಪೀಟರ್ ಲೂಯಿಸ್**

## ಲೇಖಕರ ನುಡಿ

ಒಂದು ವ್ಯಕ್ತಿಯನ್ನಾಗಲೀ, ವಸ್ತುವನ್ನಾಗಲಿ ಸ್ಥಳವನ್ನಾಗಲೀ ನಿತ್ಯವೂ ನೋಡುತ್ತಿರುತ್ತೇವೆ. ಮಾತಾಡಿರುತ್ತೇವೆ. ಆದರೆ ಅದನ್ನು ಕುರಿತು ಬರೆಯಬೇಕು ಎಂದಾಗ ದೃಶ್ಯಕ್ಕೆ ತಕ್ಕ ಅಕ್ಷರ ಸಾಹಿತ್ಯ ಒದಗಿಸುವುದು ಅಷ್ಟು ಸುಲಭದ ಕೆಲಸವಲ್ಲ. ಅದರಲ್ಲೂ ವ್ಯಕ್ತಿ ಕುರಿತು ಬರೆಯುವಾಗ ಆತ ಗತಿಸಿದ್ದರೆ, ಆತನಿಗೆ ಸಂಬಂಧಿಸಿದ ಎಲ್ಲಾ ನಿಖರ ಮಾಹಿತಿ ಸಂಗ್ರಹಿಸುವುದು ಬಹುಕಷ್ಟದ ಕೆಲಸ.

ಇಂತಹದೇ ಸಮಸ್ಯೆ ದಿವಂಗತ ಕಲಾವಿದ ಕಾಳಪ್ಪನವರನ್ನು ಕುರಿತು ಬರೆಯುವಲ್ಲಿ ಎದುರಾಯಿತು. ಕಾಳಪ್ಪನವರು ನಮ್ಮ ಸಂಸ್ಥೆಯೇ ಆದ ಆಚಾರ್ಯ ಚಿತ್ರಕಲಾಭವನದ ವತಿಯಿಂದ ಮೈಸೂರಿನ ಭರಣಿ ಗ್ಯಾಲರಿಯಲ್ಲಿ ಏರ್ಪಡಿಸಿದ್ದ ಹಿರಿಯ ಕಲಾವಿದರ ಶಿಬಿರದಲ್ಲಿ ಪಾಲ್ಗೊಂಡು (ಏಪ್ರಿಲ್ ೨೦೦೦) ಅತ್ಯಂತ ಚಟುವಟಿಕೆಯಿಂದ ಕಲಾರಚನೆ ಮಾಡಿದವರು. ಆಗ ಅವರ ಬಗ್ಗೆ ಅಷ್ಟೊಂದು ತಿಳಿಯಲು ಯತ್ನಿಸಲಿಲ್ಲ. ನಮ್ಮಲ್ಲಿ ಲಭ್ಯವಿದ್ದ ಮಾಹಿತಿಯಲ್ಲೇ ತೃಪ್ತಿ ಕಂಡಿದ್ದೆವು.

ಆದರೆ ಮುಂದೊಂದು ದಿನ ಈ ಹಿಂದೆ ಸಂಘಟಿಸಿದ ರಾಜ್ಯ ಲಲಿತಕಲಾ ಅಕಾಡಮಿಯಿಂದ ಕಾಳಪ್ಪನವರ ಬಗ್ಗೆ ಪುಸ್ತಕ ಪ್ರಕಟಿಸಲು ಉದ್ದೇಶಿಸಿದ್ದು, ನನಗೆ ಅದನ್ನು ಬರೆದುಕೊಡಬೇಕೆಂದು ಆದೇಶಿಸಿ ಪತ್ರ ಬಂದಿತು. ಆ ವೇಳೆಗಾಗಲೇ ಕಾಳಪ್ಪನವರು ಗತಿಸಿದ್ದರು (ಮೇ ೨೦೦೦).

ದಿವಂಗತ ಕಾಳಪ್ಪನವರಿಗಿಂತ ಸ್ವಲ್ಪ ಹಿರಿಯರು ಸಹಪಾಠಿಗಳು ಆಗಿದ್ದ ಮೈಸೂರಿನವರೇ ಆದ ಶ್ರೀ ರಘೋತ್ತಮ ಪುಟ್ಟಿಯವರನ್ನು ಸಂಪರ್ಕಿಸಿದಾಗ ಬಹಳ ಸಂತೋಷದಿಂದ ತಮಗೆ ತಿಳಿದ ಎಲ್ಲಾ ಮಾಹಿತಿಯನ್ನು ಒದಗಿಸಿಕೊಟ್ಟರು. ಅವರ ಎಲ್ಲಾ ಹೇಳಿಕೆಗಳನ್ನು ಧ್ವನಿ ಮುದ್ರಿಸಿಕೊಳ್ಳಲಾಯಿತು. ಅವರು ಬರೆದ ಕಲಾಕೃತಿಗಳ ಮಾಹಿತಿಗಳನ್ನು ಅವು ಎಲ್ಲೆಲ್ಲಿವೆ ಎಂಬ ಸವಿವರವನ್ನು ಕಾಳಪ್ಪನವರ ಪುತ್ರ ಕೆ. ನಾಗೇಶ ಮತ್ತು ಮಗಳು ಶ್ರೀಮತಿ ಕಮಲ ಒದಗಿಸಿಕೊಟ್ಟರು. ಮೈಸೂರಿನಲ್ಲಿರುವ ಅವರ ಅನೇಕ ಸ್ನೇಹಿತರನ್ನು ಸಂಪರ್ಕಿಸಿ ಧ್ವನಿ ಮುದ್ರಿಸಿಕೊಳ್ಳಲಾಯಿತು. ನಂತರ ಪೂರ್ಣ ಪರಿಚಯದ ಲೇಖನ ಸಿದ್ಧಪಡಿಸಿಕೊಡುವ ವೇಳೆಗಾಗಲೇ ಹಿಂದಿನ ಅಕಾಡಮಿಯ ಅವಧಿ ಮುಗಿಯುವ ಸಮಯ ಬಂದಿತ್ತು (೨೦೦೧). ಬರೆದುಕೊಟ್ಟ ಲೇಖನ ಅಚ್ಚಾಗದೇ ಹಾಗೆಯೇ ಉಳಿಯಿತು. ಹೊಸ ಸಮಿತಿಗೆ ಪತ್ರ ಬರೆದು ಮುದ್ರಣಕ್ಕೆ ಮನವಿ ಮಾಡಲಾಯಿತು.

ತದನಂತರದಲ್ಲಿ ಪ್ರಸ್ತುತ ಅಕಾಡಮಿಯ ರಿಜಿಸ್ಟ್ರಾರ್ ಅವರಿಂದ, ಪುಸ್ತಕ ಪ್ರಕಟಿಸಲು ಯೋಜಿಸಿದೆ ಎಂದೂ ಕಾಳಪ್ಪನವರ ಲೇಖನವನ್ನು ಇಂಗ್ಲೀಷ್‌ಗೆ ಅನುವಾದಿಸಿ ಕೊಡಬೇಕೆಂದು ಆದೇಶಿಸಿ ಪತ್ರ ಬಂದಿತು. ಇದು ಕಾಳಪ್ಪನವರ ಬಗ್ಗೆ ಪುಸ್ತಕ ಬರೆಯಲು ಹಿನ್ನೆಲೆ.

ವಿಳಂಬವಾದರೂ ಇದೀಗ ಪ್ರಕಟವಾಗುತ್ತಿರುವುದು ಸಮಾಧಾನಕರ ವಿಷಯ. ಈ ಕಾರ್ಯಕ್ಕೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಮಹನೀಯರಿಗೂ, ಇಂಗ್ಲೀಷ್‌ಗೆ ಬಹಳ ಅಚ್ಚುಕಟ್ಟಾಗಿ ಅನುವಾದಿಸಿಕೊಟ್ಟ ಹಿರಿಯರು, ಮಿತ್ರರೂ ಆದ ಶ್ರೀ ಯು.ಎಸ್. ವೆಂಕಟರಾಮನ ಅವರಿಗೂ, ವಿಷಯ ಸಂಗ್ರಹಣೆಗೆ ಜೊತೆ ಜೊತೆಯಲ್ಲಿಯೇ ಓಡಾಡಿ ಸಹಕರಿಸಿದ ಮಿತ್ರ ಎನ್.ಬಿ. ಕಾವೇರಪ್ಪನವರಿಗೂ ಹಲವಾರು ಸಲಹೆ ನೀಡಿ, ತಮ್ಮ ಸಂಗ್ರಹದಿಂದ ಕಾಳಪ್ಪನವರು ಪ್ರಕೃತಿ ದೃಶ್ಯ ರಚಿಸುತ್ತಿರುವ ಭಾವಚಿತ್ರ ಹಾಗೂ ಕೆಲವು ಕಲಾಕೃತಿಗಳ ಛಾಯಾಚಿತ್ರ ನೀಡಿದ ಡಾ|| ಅ.ಲ. ನರಸಿಂಹನ್ ಅವರಿಗೂ ನನ್ನ ಮೊದಲ ಕೃತಜ್ಞತೆ ಸಲ್ಲಬೇಕು.

ಎಲ್ಲಕ್ಕಿಂತ ಮುಖ್ಯವಾಗಿ ಪುಸ್ತಕ ಪ್ರಕಟಿಸಲು ಮುಂದಾದ ಅಧ್ಯಕ್ಷ ಶ್ರೀ ಪೀಟರ್ ಲೂಯಿಸ್ ಅವರಿಗೂ ರಿಜಿಸ್ಟ್ರಾರ್ ಶ್ರೀ ಬಿ.ಟಿ. ಮುನಿರಾಜಯ್ಯ ಅವರಿಗೂ, ಸಮಿತಿ ಸದಸ್ಯರಿಗೂ ನೆರವಾದ ಎಲ್ಲರಿಗೂ ನನ್ನ ಹೃತ್ಪೂರ್ವಕ ನೆನಕೆಗಳು.

ಎಲ್. ಶಿವಲಿಂಗಪ್ಪ

## ಎಲ್. ಶಿವಲಿಂಗಪ್ಪ



ಮೈಸೂರಿನಲ್ಲಿ ೧೯೪೭ರಲ್ಲಿ ಜನಿಸಿದ ಶ್ರೀ ಎಲ್. ಶಿವಲಿಂಗಪ್ಪ ಅವರು ಮೈಸೂರು ಅರಮನೆಯ ಖ್ಯಾತ ಕಲಾವಿದ ಶ್ರೀ ಶಿಲ್ಪ ಸಿದ್ಧಾಂತಿ ಸಿದ್ದಲಿಂಗಸ್ವಾಮಿ ಅವರಿಂದಲೇ ಪ್ರಾಥಮಿಕ ಹಂತದ ಚಿತ್ರಕಲಾಭ್ಯಾಸ ಮಾಡಿದವರು. ೧೯೬೬ರಲ್ಲಿ ಬೆಂಗಳೂರಿಗೆ ಬಂದ ನಂತರ ಶ್ರೀ ಎಂ.ಟಿ.ವಿ. ಆಚಾರ್ಯರ ಕಲಾಶಾಲೆಯಲ್ಲಿ ಕ್ರಮಬದ್ಧ ಶಿಕ್ಷಣ ಹಾಗೂ ಪದವಿಯನ್ನು ಪಡೆದರು. ಚಿತ್ರ-ಶಿಲ್ಪ ಎರಡೂ ಕ್ಷೇತ್ರಗಳಲ್ಲಿ ಹಲವಾರು ಪ್ರಯೋಗ ಮಾಡಿರುವ ಶ್ರೀಯುತರು ನಾಲ್ಕು ಏಕವ್ಯಕ್ತಿ ಪ್ರದರ್ಶನಗಳಲ್ಲದೆ ಹಲವಾರು ಗುಂಪು ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ೧೯೯೭-೨೦೦೦ದಲ್ಲಿ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿದ್ದ ಶ್ರೀ ಶಿವಲಿಂಗಪ್ಪ ಅವರು ಮರಳಚ್ಚಿನಲ್ಲಿ (sand cast) ಹಾಗೂ ಥರ್ಮೋಕೋಲ್‌ಗಳಲ್ಲಿ ಶಿಲ್ಪ ರಚಿಸುವ ಬಗ್ಗೆ ಹಲವಾರು ಯಶಸ್ವೀ ಪ್ರಯೋಗಗಳನ್ನು ಮಾಡಿದ್ದಾರೆ. ಅಂತೆಯೇ ಬೆಂಗಳೂರಿನ ಶಿಲ್ಪಕಲಾಮೇಳವೂ ಸೇರಿದಂತೆ ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಲಾಶಿಬಿರಗಳಲ್ಲೂ ಭಾಗವಹಿಸಿದ್ದಾರೆ. ಕಲಾಪರವಾದ ಸಂಘ ಸಂಸ್ಥೆಗಳಲ್ಲಿ, ಆಯ್ಕೆ ಸಮಿತಿಗಳಲ್ಲಿ, ಪಠ್ಯವಸ್ತು, ಪಠ್ಯವಿಷಯಗಳ ಸಮಿತಿಗಳಲ್ಲಿ ಸಕ್ರಿಯ ಸದಸ್ಯರಾಗಿದ್ದಾರೆ.

ಎಂ.ಟಿ.ವಿ. ಆಚಾರ್ಯರ ಮೆಚ್ಚಿನ ಶಿಷ್ಯರಾಗಿ ಚಿತ್ರಕಲಾ ಭವನದ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸಿದ್ದ ಇವರು ಆಚಾರ್ಯರ ಕಾಲಾನಂತರದಲ್ಲಿ ಕಲಾಶಾಲೆಯ ಪೂರ್ಣ ಜವಾಬ್ದಾರಿ ಹೊತ್ತಿರುವರಲ್ಲದೆ, ಕಲಾಗುರು ಎಂ.ಟಿ.ವಿ. ಆಚಾರ್ಯ ಹೆಸರಿನಲ್ಲಿ ಪ್ರಶಸ್ತಿ ಸ್ಥಾಪಿಸಿ, ರಾಜ್ಯದ ಹಿರಿಯ ಕಲಾವಿದರನ್ನು ಗುರುತಿಸಿ ಗೌರವಿಸುತ್ತಿದ್ದಾರೆ.

ಸ್ವತಃ ಛಾಯಾಗ್ರಾಹಕರಾಗಿದ್ದು ಚಿತ್ರಕಲೆ, ಶಿಲ್ಪಕಲೆಗಳನ್ನು ಕುರಿತು ಹಲವಾರು ಲೇಖನಗಳನ್ನು ಪತ್ರಿಕೆಗಳಿಗೆ ಬರೆದಿರುವುದಲ್ಲದೆ, ಶಿಲ್ಪಸಿದ್ಧಾಂತಿ ಶ್ರೀ ಸಿದ್ದಲಿಂಗ ಸ್ವಾಮಿಗಳು ಮತ್ತು ನಾಗೇಂದ್ರಸ್ಥಪತಿಯವರನ್ನು ಕುರಿತ ಪುಸ್ತಕಗಳು ಪ್ರಕಟಗೊಂಡಿವೆ. ದೂರದರ್ಶನ, ಆಕಾಶವಾಣಿ ಹಾಗೂ ನಿಯತಕಾಲಿಕೆ, ಪತ್ರಿಕೆಗಳಂತಹ ಮಾಧ್ಯಮಗಳಲ್ಲಿ ಸಂದರ್ಶನ, ಚಿತ್ರಶಿಲ್ಪಗಳ ಪರಿಚಯ, ವಿಮರ್ಶೆ ಕುರಿತಂತೆ ನೂರಾರು ಲೇಖನಗಳು ಪ್ರಕಟಗೊಂಡಿವೆ. 'ಉದಯವಾಣಿ' ಪತ್ರಿಕೆಯಲ್ಲಿ ಕಲೆ-ಕಲಾವಿದರನ್ನು ಕುರಿತು ನಿಯಮಿತವಾಗಿ ಪರಿಚಯಿಸುತ್ತಿದ್ದಾರೆ. ಪ್ರಸ್ತುತ ಕಲಾವಿದರ ಮಾಲಿಕೆಗಾಗಿ ಶ್ರೀ ಎಸ್. ಕಾಳಪ್ಪ ಹಾಗೂ ಶ್ರೀ ಎಚ್.ಎಸ್. ಇನಾಮತಿಯವರ ಬಗ್ಗೆ ಪುಸ್ತಕ ರಚಿಸಿಕೊಟ್ಟಿದ್ದಾರೆ.

## ಎಸ್. ಕಾಳಪ್ಪ

ಮೈಸೂರಿನ ಹಿರಿಯ ತಲೆಮಾರಿನ ಕಲಾವಿದರಲ್ಲಿ ಕಾಳಪ್ಪನವರ ಹೆಸರು ಜನಜನಿತ. ಕಲಾವಿದರ ಗುಂಪಿನಲ್ಲಿ ಕಾಳಪ್ಪನವರ ವ್ಯಕ್ತಿತ್ವ ಎದ್ದು ಕಾಣುತ್ತಿತ್ತು. ನೆತ್ತಿಯ ಕೂದಲೆಲ್ಲವೂ ಉತ್ತಿಯ ಹೋರಾಟಕ್ಕಾಗಿ ಶ್ರಮಿಸಿ, ತನ್ನ ಅಸ್ತಿತ್ವವನ್ನು ಕಳೆದುಕೊಂಡವೇನೋ ಎಂಬಂತಿರುವ ನುಣುಪಾದ ಮಂಡೆ. ಮರಳುಗಾಡಿನಲ್ಲಿ ಕಾಣುವ ಓಯಸಿಸ್‌ನಂತೆ ಕಿವಿಯ ಇಕ್ಕೆಲಗಳಲ್ಲಿ ಬೆಳೆದ ಕೆಲ ಕೂದಲು. ಕೊಬ್ಬರಿಗಿಟಕಿನ ಬಣ್ಣ. ವಿಶಾಲವಾದ ಹಣೆಯಲ್ಲಿ ಎದ್ದು ಕಾಣುವ ಮುಂಜಾನೆಯ ವಿಭೂತಿ, ಸಾಧಾರಣವಾದ ಮೈಕಟ್ಟು, ಸರಳವಾದ ಉಡುಪು. ಇವು ಅವರ ಬಾಹ್ಯರೂಪದರ್ಶನ. ಕಲೆ ಮತ್ತು ಕಲಾವಿದರಿಗಾದ ಅನ್ಯಾಯ, ವ್ಯತ್ಯಾಸ ಕುರಿತಂತೆ ಹೇಳಲು ಹೊರಟರೆ ಸರಮಾಲೆ ಹತ್ತಿಸಿದ ಪಟಾಕಿಯಂತೆ ಒಂದಾದ ಮೇಲೆ ಒಂದು ಸಿಡಿಯುತ್ತಿದ್ದವು. ಇದು ಅವರ ಮನೋದರ್ಶನ.

ಈ ರೀತಿ ಮಾತನಾಡುವುದಕ್ಕೆ ಕಾರಣವು ಇಲ್ಲದಿಲ್ಲ. ಕಾಳಪ್ಪನವರು ಕಲಾಶಾಲೆ ಆರಂಭಿಸಿ, ಕಲೆಯನ್ನೇ ಹಾಸಿಗೆ ಹೊದಿಕೆಗಳನ್ನಾಗಿ ಮಾಡಿಕೊಂಡು, ಕುಂಚ, ವರ್ಣಗಳೆಂಬ ಸಂಗಾತಿಗಳೊಡನೆ ಪೂರ್ಣ ಜೀವನ ಕಳೆದವರು.

ಬಡತನವೆಂಬ ಬೆಂಗಾವಲಿನಲ್ಲಿ ಸಿದ್ದಪ್ಪ ಮತ್ತು ಅರಸಮ್ಮ ಎಂಬ ದಂಪತಿಗಳಿಗೆ ಮಗನಾಗಿ ಮೈಸೂರಿನಲ್ಲಿ ಜನಿಸಿದ ಇವರಿಗೆ (೪.೧೧.೧೯೨೪) ಶಾಲಾ ಓದಿಗಿಂತ ಕಲೆ ಎಂಬೆರಡಕ್ಷರಕ್ಕೆ ಮನಸೋತು ತಾವಾಗಿಯೇ ತಂದುಕೊಂಡ ಕಷ್ಟದ ಸರಮಾಲೆ ಅನ್ನುವುದಕ್ಕಿಂತ ಒಲಿದಿದ್ದೆ ಕಲೆ ಎನ್ನಬಹುದು. ಕಲೆಗಾಗಿ ಸೇರಿದ್ದು ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಗೆ.

ಮೈಸೂರಿನಲ್ಲಿ ಎಲ್ಲೆಲ್ಲಿಯೂ ರಾಜಾಶ್ರಯದಿಂದ ಕಲೆಯ ವಾತಾವರಣ. ರಾಜಾರವಿವರ್ಮ, ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ಧಲಿಂಗಸ್ವಾಮಿಗಳು, ಕೆ. ವೆಂಕಟಪ್ಪ, ಕೇಶವಯ್ಯ, ವೈ. ನಾಗರಾಜು, ವೈ. ಸುಬ್ರಮಣ್ಯರಾಜು, ಶಂಕರರಾಜು, ಎಸ್.ಆರ್. ಅಯ್ಯಂಗಾರ್, ಎಸ್.ಎನ್. ಸ್ವಾಮಿ, ನಾಗೇಂದ್ರ ಸ್ಥಪತಿ ಮುಂತಾದವರೆಲ್ಲಾ ಅರಮನೆಗಾಗಿ ಹಗಲಿರುಳು ಚಿತ್ರರಚಿಸುತ್ತಿದ್ದರು. ಅರಮನೆ ಕಲಾವಿದರೆಂದರೆ ಅದೊಂದು ಬಗೆಯ ಹೆಮ್ಮೆ. ಅವರನ್ನು ಕಾಣುವುದೇ ಒಂದು ಬಗೆಯ ಪುಣ್ಯವೆಂದು ಕಲಾರಸಿಕರು ಭಾವಿಸುತ್ತಿದ್ದರು. ಕಾಳಪ್ಪನವರ ಚಿಕ್ಕಪ್ಪ ತಮ್ಮಯ್ಯ ಎಂಬುವರು ಶಿಲ್ಪ ಕೆಲಸದಲ್ಲಿ ನಿಷ್ಣಾತರಾಗಿದ್ದರು. ಮೈಸೂರಿನ ಸುತ್ತಮುತ್ತಲಿನ ಪ್ರದೇಶಗಳಿಗೆ ಶಿಲ್ಪಗಳನ್ನು ಮಾಡಿಕೊಡುವ ಕೆಲಸದಲ್ಲಿ ತೊಡಗಿದ್ದರು. ಅರಮನೆಯ ದೇವಾಲಯಗಳಿಗೆ ಸಂಬಂಧಿಸಿದಂತೆ ತುಂಬಾ ಕೆಲಸವಿದ್ದ ಕಾಲದಲ್ಲಿ ಬಾಲಕ ಕಾಳಪ್ಪನನ್ನು ಜೊತೆಯಲ್ಲಿ ಕರೆದುಕೊಂಡರು. ಕಲಾಭಿರುಚಿ ತಾನಾಗಿಯೇ ಬೆಳೆಯತೊಡಗಿತು.

*ಎಸ್. ಕಾಳಪ್ಪ*
*S. Kalappa*



## ಕಲಾ ಶಿಕ್ಷಣ

ಸಾವಿರದ ಒಂಭೈನೂರ ಮೂವತ್ತೆಂಟರಲ್ಲಿ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಗೆ ಸೇರಿದ ಕಾಳಪ್ಪನವರು ಐದುವರ್ಷಗಳ ಕಲಾ ಶಿಕ್ಷಣ ಪೂರೈಸಿ 'ಜಿ.ಡಿ. ಆರ್ಟ್ಸ್'ನ್ನು ಉತ್ತಮ ದರ್ಜೆಯಲ್ಲಿ ಪಾಸಾದರು. ವಿದ್ಯಾರ್ಥಿ ದೆಸೆಯಿಂದಲೇ ಮೆರಿಟ್ ಸ್ಕಾಲರ್‌ಶಿಪ್ ಪಡೆದಿದ್ದರು. ಆಗ್ಗೆ ಅವರ ಗುರುಗಳಾಗಿದ್ದವರು ಎಸ್.ಜಿ. ಟಂಕಸಾಲೆ, ಎನ್.ಜಿ. ಪಾವಂಜೆ, ಎಸ್.ಎನ್. ಸ್ವಾಮಿ ಮತ್ತು ವೈ. ಸುಬ್ರಮಣ್ಯರಾಜು ಮುಂತಾದವರು. ಮುಂಬೈನ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಶಾಲೆಯಿಂದ ಬಂದಂತಹ ವೈ. ಸುಬ್ರಮಣ್ಯರಾಜು ಅವರು ಬಹಳ ದರ್ಪದಿಂದ ಇರುತ್ತಿದ್ದರು. ಕಲೆಯ ಮೇಲೆ ಪಾಶ್ಚಾತ್ಯ ಪ್ರಭಾವ ಆದಂತೆ ಧರಿಸುವ ಉಡುಪಿನ ಮೇಲೂ ಅಗಾಧ ಪ್ರಭಾವವಾಗಿತ್ತು. ಆದ್ದರಿಂದ ವೈ. ಸುಬ್ರಮಣ್ಯರಾಜು ಅವರು ಕೋಟು, ಟೈ, ಪ್ಯಾಂಟು ಧರಿಸಿ ಬ್ರಿಟೀಷ್ ಆಡಳಿತಾಧಿಕಾರಿಯಂತೆ ಕಲಾಶಾಲೆಗೆ ಬರುತ್ತಿದ್ದರು. ವಿದ್ಯಾರ್ಥಿಗಳನ್ನು ಕುರಿತು ಜಬರ್‌ದಸ್ತು ಮಾಡುತ್ತಿದ್ದರು. ಅವರ ಬ್ಯಾಚ್‌ನಲ್ಲಿ ರಘೋತ್ತಮಪುಟ್ಟಿ, ಎಂ.ಎಸ್. ಚಂದ್ರಶೇಖರ್, ಸೋಮಸುಂದರ್ ಮತ್ತು ಕಾಳಪ್ಪ ಇರುತ್ತಿದ್ದರು. ಈ ನಾಲ್ವರಲ್ಲಿ ಹಿರಿಯವರೇ ಪುಟ್ಟಿಯವರು. ಆಗ್ಗೆ ಅವರಿಗೆ ೨೬ ವರ್ಷ. ಕಾಳಪ್ಪನವರಿಗೆ ೧೬ ವರ್ಷ. ಇವರೆಲ್ಲರ ಗುರುಗಳಾದ ವೈ. ಸುಬ್ರಮ್ಮಣ್ಯರಾಜು ಅವರಿಗೆ ಸುಮಾರು ೨೮ ವರ್ಷ. ಅಂದಿನ ವಿದ್ಯಾರ್ಥಿ ದೆಸೆಯ ಸನ್ನಿವೇಶವನ್ನು ರಘೋತ್ತಮ ಪುಟ್ಟಿಯವರು ಹೀಗೆ ನೆನೆಸಿಕೊಳ್ಳುತ್ತಾರೆ.

## ಹುಟ್ಟು ಕಲಾವಿದ

ಕಲಾತರಗತಿಗಳು ಎರಡು ಅಂಗಳದಲ್ಲಿ ನಡೆಯುತ್ತಿದ್ದು, ನಾಲ್ಕನೇ ತರಗತಿಯವರಿಗೆ ರೂಪ ಚಿತ್ರಣ (life study), ಎರಡನೇ ತರಗತಿಯವರಿಗೆ ಸ್ಥಿರ ಚಿತ್ರಣ (Still life)ಗಳು ಅಕ್ಕಪಕ್ಕಗಳಲ್ಲಿ ನಡೆಯುತ್ತಿದ್ದವು. ಮಧ್ಯಾಹ್ನದ ಊಟದ ಸಮಯದಲ್ಲಿ ಎಲ್ಲರೂ ಊಟಕ್ಕೆ ಹೋಗುತ್ತಿದ್ದರೆ ಕಾಳಪ್ಪ ಮತ್ತು ರಘೋತ್ತಮ ಪುಟ್ಟಿಯವರು ಹಿರಿಯ ವಿದ್ಯಾರ್ಥಿಗಳು ಮಾಡುತ್ತಿದ್ದ ಲೈಫ್‌ಸ್ಟಡಿ ಕಡೆಗೆ ಹೋಗುತ್ತಿದ್ದರು. ಪರಸ್ಪರ ಚರ್ಚಿಸುತ್ತಿದ್ದರು. ಅವರಿಗೂ ಯಾರನ್ನಾದರೂ ಕೂರಿಸಿ ಬರೆಯುವ ಆಸೆಯಾಯಿತು. ಆ ಕಲಾಶಾಲೆಯ ಜವಾನನನ್ನು ಕೂರಿಸಿ ಮರುದಿನವೇ ಚಿತ್ರಬಿಡಿಸಲು ಆರಂಭಿಸಿದರು. ಸ್ವಲ್ಪಹೊತ್ತಿನಲ್ಲಿಯೇ ಮಧ್ಯಾಹ್ನದ ಊಟ ಪೂರೈಸಿ ಬಂದ ಸುಬ್ರಮಣ್ಯರಾಜುರವರು 'ಏ ಕಾಳಪ್ಪ ಏನ್ ಮಾಡ್ತಿದ್ದೀಯಾ, ನಿನಗಾರು ಹೇಳಿದರು' ಎಂದು ಗದರಿಸಿದರು. ಅಷ್ಟೇ ಸರಾಗವಾಗಿ ಭಾವಚಿತ್ರ ಬರೆಯುತ್ತಿದ್ದೇನೆ ಸಾರ್, ಪುಟ್ಟಿ ಹೇಳಿದರು. ಎನ್ನಬೇಕೆ? ಪುಟ್ಟಿಯವರಿಗಾದ್ರೊ ತಾನು ಸಿಕ್ಕಿಕೊಳ್ಳುವುದರ ಜೊತೆಗೆ ನನ್ನನ್ನು ಸಿಕ್ಕಿಸಿಬಿಟ್ಟನಲ್ಲಾ ಎಂಬ ಚಿಂತೆ ಕಾಡಹತ್ತಿತ್ತು. ನೀನು ನಾಳೆಯಿಂದ ಕ್ಲಾಸಿಗೆ ಬರಬೇಡ ಅಂದು ಬಿಟ್ಟರು. ಒಬ್ಬರ ಮುಖ ಒಬ್ಬರು ನೋಡುತ್ತಿದ್ದಾರೆ. ಹಾಗೆಂದವರೇ ತಮ್ಮ ಶಾಲಾ ಕೋಣೆಗೆ ಹೊರಟುಬಿಟ್ಟರು. ಕಾಳಪ್ಪ ದಿಗಿಲು ಬೀಳದೆ ತಾವು ಆರಂಭಿಸಿದ್ದ ಚಿತ್ರವನ್ನು ಪೂರೈಸಿ ಗದರಿಸಿದ ಗುರುಗಳ ಬಳಿ ತೋರಿಸಿದರು. ಅದೇನು ಸಂತೋಷವಾಯಿತೋ ಕೋಪಗೊಂಡ ಗುರುವಿಗೆ. 'ನಿಜಕ್ಕೂ ನೀನು ಹುಟ್ಟು ಕಲಾವಿದ, ನಿನಗೆ ನನ್ನ ಪೂರ್ಣ ಸಹಕಾರವಿದೆ, ಬೆಂಬಲವಿದೆ, ಧೈರ್ಯವಾಗಿ ಚಿತ್ರ ಬರಿ'ಎಂದು ಬೆನ್ನು ತಟ್ಟಿದರು. ಬಾಲಕ ಕಾಳಪ್ಪನವರಿಗೆ ಆಗ್ಗೆ ಅಂತಹ ಗ್ರಹಿಸುವ ಶಕ್ತಿ ಇತ್ತು, ಗ್ರಹಿಸಿದುದನ್ನು ಚಿತ್ರರೂಪದಲ್ಲಿ ಮೂಡಿಸುವ ಕಲೆ ಸಿದ್ದಿಸಿತ್ತು ಎಂಬುದಕ್ಕೆ ಅದೊಂದು ಉತ್ತಮ ಉದಾಹರಣೆ ಎಂದು ಇಂದಿಗೂ ನೆನೆಸಿಕೊಳ್ಳುತ್ತಾರೆ ರಘೋತ್ತಮ ಪುಟ್ಟಿಯವರು.

## ಹಿರಿಯ ಕಲಾವಿದರೊಡನೆ

ಪುಟ್ಟಿಯವರು ಕಾಳಪ್ಪನವರು ಜೊತೆಗೂಡಿಯೇ ಇರುತ್ತಿದ್ದರು.ಎಲ್ಲೇ ಹೋದರೂ ಒಟ್ಟಾಗಿಯೇ ಹೋಗುತ್ತಿದ್ದರು. ಜೊತೆಗೂಡಿ ರಚಿಸಿದ ನಿಸರ್ಗಚಿತ್ರಗಳು ಅನೇಕ. ಕಾಳಪ್ಪನವರು ಶಾಲೆ ಬಿಟ್ಟೊಡನೆಯೇ ಆಟಪಾಟಗಳಿಗೆ ಎಲ್ಲೂ ಹೋಗುತ್ತಿರಲಿಲ್ಲ. ಅರಮನೆಯ ಹಿರಿಯ ಕಲಾವಿದರಾದ ಮತ್ತು ಆಗಿನ ಎಲ್ಲಾ ಕಲಾವಿದರಿಗೆ ಬೋಧಕರಾಗಿದ್ದ ಕೇಶವಯ್ಯನವರು ಚಿತ್ರ ಬಿಡಿಸುತ್ತಿದ್ದ ಸ್ಟುಡಿಯೋ ಬಳಿ ಹೋಗುತ್ತಿದ್ದರು. ಅವರಾದರೋ ತಾವು ಬರೆಯುವ ವೇಳೆಯಲ್ಲಿ ಯಾರನ್ನೂ ಒಳಗೆ ಬಿಡುತ್ತಿರಲಿಲ್ಲ. ಏಕಾಗ್ರತೆಗೆ ಭಂಗ ಬರುತ್ತದೆ ಎಂಬ ಭಾವನೆಯೋ ಅಥವಾ ರಚನಾ ವಿಧಾನವನ್ನು ಎಲ್ಲರೂ ಅನುಸರಿಸುತ್ತಾರೆ ಎಂಬ ಭಾವನೆಯಿಂದಲೋ ಒಂಟಿಯಾಗೇ ಕೆಲಸ ಮಾಡುತ್ತಿದ್ದರು. ಆದರೆ ಬಾಲಕ ಕಾಳಪ್ಪ ಅವರು ಚಿತ್ರ ರಚಿಸುತ್ತಿದ್ದ ಕೋಣೆಯ ಕಿಟಕಿಗೆದುರಾಗಿ ನಿಂತು ನೋಡುತ್ತಿದ್ದರು. ಅನೇಕ ದಿನಗಳವರೆಗೆ ಗಮನಿಸಿದ ಕೇಶವಯ್ಯನವರು ಕಾಳಪ್ಪನವರನ್ನು ಕರೆದು ಕಲೆಯ ಮರ್ಮಗಳನ್ನು ತಿಳಿಸಿ ತೋರಿಸುತ್ತಿದ್ದರು.

ಮತ್ತೊಂದೆಡೆಯಲ್ಲಿ ಎಸ್.ಆರ್. ಅಯ್ಯಂಗಾರ್ ಅವರು ಚಿತ್ರರಚಿಸುತ್ತಿದ್ದರು. ಅವರಲ್ಲಿಯೂ ಹೋಗುತ್ತಿದ್ದರು. ಮನೆಗೆ ರಾತ್ರಿ ಬಂದು ತಾವು ನೋಡಿದ ಚಿತ್ರ ಶೈಲಿಯನ್ನೇ ಅನುಕರಿಸಿ ಚಿತ್ರ ಬರೆದು ಮಾರನೇ ದಿನ ಹೋಗಿ ತೋರಿಸಿ ಶಹಬಾಸ್ ಗಿಟ್ಟಿಸುತ್ತಿದ್ದರು. ಈ ನಿತ್ಯ ಪ್ರಕ್ರಿಯೆಯಿಂದ ಕಲಾಭ್ಯಾಸಂಗವೆಂಬುದು ದಿನಕ್ಕೆ ಹದಿನೆಂಟು ಗಂಟೆಗಳ ಕಾಲ ನಡೆಯುತ್ತಿತ್ತು. ಶೀಘ್ರ ಲಿಪಿಕಾರನಂತೆ ಜನ ಅಡ್ಡಾಡುವ, ನಿಂತ, ಕೂತ, ವಿವಿಧ ಭಾವಭಂಗಿಯ ಚಿತ್ರಗಳನ್ನು ದಿನವಹಿ ನೂರಾರು ರಚಿಸುತ್ತಿದ್ದರು. ಆ ಹಿರಿಯ ಕಲಾವಿದರು ತದ್ರೂಪತೆಗೆ ಕೊಡುತ್ತಿದ್ದ ಮಹತ್ವ, ಭಾವಚಿತ್ರಗಳ ಬಣ್ಣಗಾರಿಕೆಯ ಬೆಡಗು, ನಾಜೂಕಿನ ಕುಸುರಿ ಕೆಲಸ ಇವೆಲ್ಲವೂ ಬಾಲಕ ಕಾಳಪ್ಪನವರಲ್ಲಿ ಗಾಢ ಪರಿಣಾಮವುಂಟುಮಾಡಿತ್ತು. ಕಲಾಕಲಿಕೆಯ ಸಂದರ್ಭದಲ್ಲಿಯೇ ತಮ್ಮ ಕಲಾಸಾಮಗ್ರಿಗೆ ಬೇಕಾದಷ್ಟು ಹಣವನ್ನು ಗಳಿಸಿಕೊಳ್ಳಬೇಕಾಗಿದ್ದ ಅನಿವಾರ್ಯತೆ ಇದ್ದುದರ ಪರಿಣಾಮ ವಾಣಿಜ್ಯ ಕಲೆಯನ್ನು ರೂಢಿಸಿಕೊಂಡಿದ್ದರು.

## ಸಿನಿಮಾದಲ್ಲಿ ಚಿತ್ರಕಲೆ

ಒಂದು ಸಾವಿರದ ಒಂಬೈನೂರ ನಲವತ್ತಾರರಲ್ಲಿ ಬೆಂಗಳೂರಿಗೆ ಬಂದು ವಾಣಿಜ್ಯ ಕಲಾಕೇಂದ್ರ ಆರಂಭಿಸಿದರು (Sign Art Centre). ಕೆಲಸಗಳು ಬರತೊಡಗಿದವು. ಜೀವನ ನಿರ್ವಹಣೆಗೆ ಬಾಧಕವಾಗದಂತೆ ಯಾವುದೇ ಕೆಲಸ ಬಂದರೂ ಸ್ವೀಕರಿಸುತ್ತಿದ್ದರು. ಮೂರ್ನಾಲ್ಕು ವರ್ಷ ಒಂಟಿಯಾಗಿದ್ದ ಕಾಳಪ್ಪನವರಿಗೆ ಕಂಕಣಬಲ ಕೂಡಿಬಂತು. ೧೯೫೦ರಲ್ಲಿ ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ಸಂತೆ ಸರಗೂರಿನ ಸುಬ್ಬಮ್ಮ ಎಂಬುವರೊಡನೆ ವಿವಾಹವಾಯಿತು. ಲೀಲಾಜಾಲವಾಗಿ ಒಂಟಿಯಾಗಿ ಕಾಲಕಳೆಯುತ್ತಿದ್ದ ಕಾಳಪ್ಪನವರಿಗೆ ಬೆಂಗಳೂರಿನಲ್ಲಿ ಮನೆ ಮಾಡುವ ಪರಿಸ್ಥಿತಿಯಾಯಿತು. ಬೆಂಗಳೂರಿನ ದುಬಾರಿ ಬಾಡಿಗೆ, ಮೇಲಾಗಿ ಕೊಡಬೇಕಾದ ಹೆಚ್ಚಿನ ಮುಂಗಡಹಣ ಇವುಗಳ ಚಿಂತೆಯಿಂದಾಗಿ ಚಡಪಡಿಸುತ್ತಿದ್ದ ಸಂದರ್ಭದಲ್ಲಿಯೇ ಮೈಸೂರಿನ ಪ್ರಖ್ಯಾತ ನವಜ್ಯೋತಿ ಸ್ಟುಡಿಯೋನಿಂದ ಕರೆಬಂತು.

ಅತ್ಯುತ್ಸಾಹದಿಂದ ಆರ್ಟ್ ಡೈರೆಕ್ಟರ್ ಆಗಿ ಸೇರಿದ ಇವರು ಹಲವಾರು ಚಿತ್ರಗಳಿಗೆ ಮೂರ್‍ನಾಲ್ಕು ವರ್ಷ ಕೆಲಸ ಮಾಡಿದರು. ಚಲನಚಿತ್ರ ಉದ್ಯಮ ಈಗಿನಷ್ಟು ಬೆಳದಿರದ ಕಾಲ. ಆಗಾಗ್ಗೆ ಅಪರೂಪಕ್ಕೊಮ್ಮೆ ಕನ್ನಡ ಚಲನಚಿತ್ರಗಳು ತಯಾರಾಗುತ್ತಿದ್ದವು. ಬಹುಪಾಲು ಚಿತ್ರಗಳು ಮದರಾಸಿನಲ್ಲಿ ತಯಾರಾಗುತ್ತಿದ್ದವು. ಹಾಗೆಯೇ ತೆಲುಗು ಚಿತ್ರರಂಗವೂ ಅಪಾರವಾಗಿ ಬೆಳೆದಿತ್ತು. ಹೈದ್ರಾಬಾದ್ ಕೇಂದ್ರವಾಗಿದ್ದು, ಪೌರಾಣಿಕ ಚಿತ್ರಗಳಿಗೆ ಹೇಳಿಮಾಡಿಸಿದಂತಹ ವಿಶಾಲವಾದ ಒಳ ಆವರಣವಿದ್ದುವು. ನವಜ್ಯೋತಿ ಸ್ಟುಡಿಯೋ ಆ ನಿಟ್ಟಿನಲ್ಲಿ ವಿಶಾಲವಾಗಿದ್ದರೂ ಹೊರಾಂಗಣ ಚಿತ್ರೀಕರಣಕ್ಕೆ ಬೇಕಾದ ಪರಿಕರಗಳ ಕೊರತೆ ಇತ್ತು. ಲೈಟ್‌ಬಾಯ್‌ನಿಂದ ಹಿಡಿದು ಎಲ್ಲರನ್ನೂ ಹೊರರಾಜ್ಯದಿಂದಲೇ ಕರೆಸುತ್ತಿದ್ದರು.

ಚಲನಚಿತ್ರದಲ್ಲಿ ಕಲಾನಿರ್ದೇಶಕ ಹುದ್ದೆ (Art Director) ಅತಿ ಮಹತ್ವದ್ದು. ಕಾರಣವಿಷ್ಟೆ. ಯಾವುದೇ ಶೂಟಿಂಗ್ ಮಾಡಬೇಕಾದರೆ ಹೊರಾಂಗಣಕ್ಕಿಂತ ಒಳಾಂಗಣವೇ ಅಧಿಕವಾಗಿತ್ತು. ಸಾಮಾಜಿಕ ಚಿತ್ರವಾಗಲಿ, ಪೌರಾಣಿಕ ಚಿತ್ರವಾಗಲಿ ಸ್ಟುಡಿಯೋದ ವಿಶಾಲ ಆವರಣದೊಳಗೆ ನಡೆಯಬೇಕಾಗಿತ್ತು. ಬೆಟ್ಟಗುಡ್ಡಗಳ, ನದಿ ಜಲಪಾತಗಳ, ಉದ್ಯಾನವನಗಳ, ಕಾಡುಮೇಡುಗಳ, ಮಹಡಿ ಮಹಲುಗಳ ಅಥವಾ ಅರಮನೆ, ಬರಿಮನೆ, ಕೆಳಮನೆ, ಸೆರೆಮನೆ, ಕೋಟೆ ಕೊತ್ತಲು, ಹಳ್ಳಿಯ ದೃಶ್ಯ ಹೀಗೆ ಒಂದೇ ಎರಡೇ, ಆಯಾಯ ಕಥಾ ಸಂದರ್ಭಗಳಿಗೆ ಅನುಗುಣವಾಗಿ ಚಲನಚಿತ್ರ ನಿರ್ದೇಶಕರ ಅಣತಿಗನುಗುಣವಾಗಿ ಸಜ್ಜುಗೊಳಿಸಬೇಕು. ಇಲ್ಲಿ ಮರಗೆಲಸದವನ, ವರ್ಣಾಲಂಕಾರದವನ, ಕೇಶಾಲಂಕಾರದವನ ಪಾತ್ರವೂ ಮುಖ್ಯ. ಚಲನಚಿತ್ರದ ಕಲಾ ಪರಿಪೂರ್ಣತೆಗೆ ಇವರೆಲ್ಲರ ಸ್ನೇಹಹಸ್ತ ಅತ್ಯವಶ್ಯಕ. ಕಲಾ ನಿರ್ದೇಶಕನಾದವನು ಇವರೆಲ್ಲರನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಬೇಕು. ಸಂದರ್ಭೋಚಿತವಾಗಿ ದುಡಿಸಿಕೊಳ್ಳಬೇಕು, ತಾವೂ ದುಡಿಯಬೇಕು.

ಕಾಳಪ್ಪನವರು ನನ್ನೊಡನೆ ತಮ್ಮ ಸ್ಟುಡಿಯೋ ಅನುಭವಗಳನ್ನು ಹಂಚಿಕೊಳ್ಳುತ್ತಾ ಹೇಳಿದ ಮಾತನ್ನು ದಾಖಲಿಸುವ ಮೂಲಕ ಕಲಾವಿದನ ಕೆಲಸದ ವೈವಿಧ್ಯತೆಯ ಅರಿವು ಓದುಗನಿಗೆ ಉಂಟಾಗುತ್ತದೆ. ಪೌರಾಣಿಕ ಚಿತ್ರವೊಂದರಲ್ಲಿ ಕೈಲಾಸದ ಸೆಟ್ಟಿಂಗ್‌ನಲ್ಲಿ ಈಶ್ವರನ ನೃತ್ಯವಿದೆ. ರೌದ್ರತೆಯ ಸಂಕೇತವದು. ಹಲವಾರು ದೇವತೆಗಳಲ್ಲಿ ನಾರದ, ಭೃಂಗಿ, ನಂದಿ ವಿವಿಧ ವಾದ್ಯ ನುಡಿಸಬೇಕು. ಉಳಿದವರು ಕೈಮುಗಿದು ನಿಂತಿರುವುದು. ಪ್ರಧಾನ ನೃತ್ಯಗಾರ ಶಿವನ ಪಾತ್ರಧಾರಿಯಾಗಿದ್ದಾನೆ. ಮಿಕ್ಕೆಲ್ಲವೂ ಕೃತಕ. ಸೀಸದ ಕಡ್ಡಿಯ ಸಹಾಯದಿಂದ ಮೊದಲು ನಕ್ಷೆಯನ್ನು (Key Sketch) ತಯಾರುಮಾಡಿಕೊಳ್ಳಬೇಕು. ನಂತರ ನಿರ್ದೇಶಕರ ಅನುಮತಿಪಡೆದು ಕಲಾನಿರ್ದೇಶಕ ತನ್ನ ಕಲಾಚಾತುರ್ಯದಿಂದ ನಿರ್ಮಾಣದತ್ತ ಗಮನಹರಿಸಬೇಕು. ಬೆಟ್ಟಗಳ ಸಾಲುಗಳೆಲ್ಲವೂ ಮರದ ಪ್ಲೇವುಡ್ ಹಲಗೆಯಿಂದ ಮಾಡಿದವು. ಹಾಗೆಯೇ ದೂರದೂರಕ್ಕೆ ಸಾಗುವ ಮರ, ನದಿ, ಝರಿ ಇತ್ಯಾದಿ ಅವುಗಳ ಆಕಾರಕ್ಕೆ ತಕ್ಕಂತೆ ಪ್ಲೇವುಡ್ ಕತ್ತರಿಸಿ ನಂತರ ಕೋರಾ ಲಾಂಗ್‌ಕ್ಲಾತ್ ಬಟ್ಟೆ ಅಂಟಿಸಿ, ಸೀಮೆಸುಣ್ಣದ ಪುಡಿಯನ್ನು ಕುದಿಸಿದ ಮರ ವಜ್ರದ ನೀರಿನಲ್ಲಿ ಬೆರೆಸಿ ಮೊದಲು ಅಂಟಿಸಿದ ಬಟ್ಟೆಯ ಮೇಲೆ ಸವರಿ ಸಿದ್ಧಗೊಳಿಸಿಕೊಳ್ಳಬೇಕು. ಈಗಾದರೆ ಫೆವಿಕೋಲ್ ಎಂಬ ಅಂಟು ಮಾಧ್ಯಮವಿದೆ. ಅದನ್ನೇ ನೇರವಾಗಿ ಬಳಸಬಹುದಾಗಿದೆ. ಹಿಂದೆ ಅದು ಬಳಕೆಗೆ ಬಂದಿರಲಿಲ್ಲ. ಆ ರೀತಿ ಸಿದ್ದಗೊಂಡವುಗಳಲ್ಲಿ ಟೆಂಪರಾ ಬಣ್ಣಗಳಿಂದ ಬರೆಯಬೇಕು. ಆಕಾಶ, ಮೋಡ, ಕಾರ್ಗತ್ತಲೆ, ಕದ್ದಿಂಗಳು, ಬೆಳದಿಂಗಳು ಎಲ್ಲವೂ ಕಲಾವಿದನ ಕೈಚಳಕದಿಂದಲೇ

ತಯಾರಾಗಬೇಕು. ಆದರೆ ಅವು ಸ್ಟುಡಿಯೋ ಸೆಟ್ಟಿಂಗ್ ಎಂಬ ಭಾವನೆ ಬಾರದಂತೆ ಛಾಯಾಗ್ರಾಹಕನು ಚಮತ್ಕಾರದಿಂದ ದೂರಗ್ರಾಹಿತ್ವ (Longshot), ಸಮೀಪ ಗ್ರಾಹಿತ್ವ (Closeup) ಇತ್ಯಾದಿ ತಂತ್ರಗಳಿಂದ ಅವು ನೈಜವೇನೋ ಎಂಬಂತೆ ಪ್ರೇಕ್ಷಕನಿಗೆ ಅನಿಸುವಂತೆ ಮಾಡುತ್ತಾನೆ.

ಈ ಸಂದರ್ಭದಲ್ಲಿ ಹಗಲು ರಾತ್ರಿಯನ್ನು ಗಣನೆಗೆ ತೆಗೆದುಕೊಳ್ಳದಂತೆ ಕೆಲಸ ಮಾಡಬೇಕು. ಮುಖ್ಯ ನಟನ ಕಾಲನಿಗದಿಯಾದ ದಿನ ಸಮಯವನ್ನನುಸರಿಸಿ ಎಲ್ಲಾ ಸಿದ್ಧತೆ ಆಗಬೇಕು. ಕಲಾವಿದನಾದವನು ರಾತ್ರಿಹಗಲೆನ್ನದೇ ಸಿದ್ಧತೆ ನಡೆಸಬೇಕು. ಇಂತಹ ಸಂದಿಗ್ಧತೆಯಲ್ಲಿ ಕಾಳಪ್ಪನವರು ಎರಡು ಮುಖ್ಯ ದೃಶ್ಯಗಳನ್ನು ರಚಿಸಿದರು.

ತೊಂಬತ್ತು ಅಡಿ ನೀಳ, ಮೂವತ್ತು ಅಡಿ ಎತ್ತರದ ಒಂದು ಬೃಹತ್ ಹಿನ್ನಲೆ ಪರದೆಯಲ್ಲಿ ಬರೆಯಬೇಕಾಗಿದ್ದುದು ಸೀತಾಪಹರಣ ಸನ್ನಿವೇಶವನ್ನು. ಪಾತ್ರವೇ ಇಲ್ಲದಿದ್ದ ಕಾರಣ ಕಾಡು, ಸೀತೆ ಗೆರೆಯನ್ನು ದಾಟಿ ಬಂದದ್ದು, ರಾವಣ ಸನ್ಯಾಸಿ ರೂಪದಲ್ಲಿ ಬಂದದ್ದು, ನಂತರ ಅಪಹರಿಸಿದ್ದು ಎಲ್ಲಾ ಹಂತಹಂತವಾಗಿ ಚಿತ್ರಿಸಿಕೊಟ್ಟ ಬಳಿಕ ಛಾಯಾಗ್ರಹಣ ಮಾಡಿಕೊಳ್ಳಲಾಯಿತು. ಕೇವಲ ಒಂದೆರಡು ನಿಮಿಷ ತೋರಿಸುವುದಷ್ಟೇ ಆದರೂ, ನಮಗಂತೂ ಸನ್ನಿವೇಶ ಚಿತ್ರಣ ಮಾಡುವುದಕ್ಕೆ ಹತ್ತಾರುದಿನ ಕೆಲಸ ಮಾಡಬೇಕಾಯಿತು ಎನ್ನುತ್ತಿದ್ದರು.

ಮತ್ತೊಂದು ಸನ್ನಿವೇಶದಲ್ಲಿ ರಾಜನು ತಿರುಪತಿ ತಿಮ್ಮಪ್ಪನ ದರ್ಶನಕ್ಕೆ ಬರುತ್ತಾನೆಂಬ ವಿಷಯವಿತ್ತು. ಇಡೀ ದೇವಾಲಯದ ನಿರ್ಮಾಣದ ಅಗತ್ಯವಿತ್ತು. ಮೂಲ ದೇವರಾದ ತಿರುಪತಿ ತಿಮ್ಮಪ್ಪನನ್ನು ಬೆಂಡಿನಿಂದ ಮಾಡಿ ಅಲಂಕರಿಸಿ, ಗರ್ಭಗುಡಿ, ಕಂಬ, ಮಹಾದ್ವಾರ ಎಲ್ಲವನ್ನೂ ಮಾಡಿದುದಾಯಿತು. ಚಿತ್ರೀಕರಣದ ಸಮಯ ಏಳೆಂಟುಗಂಟೆ ಹಿಡಿದರೆ ವೀಕ್ಷಣೆಗೆ ತೋರಿಸಿದುದು ನಾಲ್ಕು ನಿಮಿಷ ಮಾತ್ರ. ಕಲಾವಿದನಿಗೆ ಹಿಡಿದ ಕೆಲಸ ತಿಂಗಳುಗಟ್ಟಲೆ. ನಾಲ್ಕೈದು ವರ್ಷ ಸತತವಾಗಿ ಕೆಲಸ ಮಾಡಿದ ಸಂದರ್ಭದಲ್ಲಿ ತಮಿಳುನಾಡು, ಕೇರಳಗಳಲ್ಲಿ ಸಂಚರಿಸುವಂತಾಯಿತು. ಎಂ.ಜಿ. ರಾಮಚಂದ್ರನ್ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದ ಹೊಸದರಲ್ಲಿ ಮೈಸೂರಿನ ನವಜ್ಯೋತಿ ಸ್ಟುಡಿಯೋದಲ್ಲಿ ಚಿತ್ರೀಕರಣವಿತ್ತು. ಆಗ್ಗೆ ಕಾಳಪ್ಪನವರೊಡನೆ ಸಖ್ಯ ಬೆಳೆದು ಮದ್ರಾಸಿಗೆ ಆಹ್ವಾನಿಸಿದರು. ಮೈಸೂರೇ ಚೆಂದ, ಮೈಸೂರೇ ಅಂದ ಎಂಬ ವಾತ್ಸಲ್ಯಕ್ಕೊಳಗಾದ ಕಾಳಪ್ಪನವರು ಮದ್ರಾಸಿಗೆ ಹೋಗಲೇ ಇಲ್ಲ. ಒಂದು ವೇಳೆ ಹೋಗಿದ್ದರೆ ಅವರ ದಿಕ್ಕು ಬದಲಾಗುತ್ತಿತ್ತು. ಮಹಾತ್ಮ ಪಿಕ್ಚರ್ಸ್‌ನ ಶ್ರೀಶಂಕರಸಿಂಗ್ ತೆಗೆಯುತ್ತಿದ್ದ ಚಲನಚಿತ್ರಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಕಲಾ ನಿರ್ದೇಶಕರಾಗಿ ಕೆಲಸಮಾಡಿದ್ದಾರೆ. ಸ್ತ್ರೀರತ್ನ, ಅಪೂರ್ವ ಚಿಂತಾಮಣಿ, ಶ್ರೀಕೃಷ್ಣಲೀಲಾ, ತುಳಸಿರಾಮದಾಸ್, ದೊಂಗಲು(ತೆಲುಗು), ಭರತ್ ಭೂಷಣರವರ ಬಸಂತ ಬಹಾರ್ ಹಿಂದಿ ಚಿತ್ರ ಮುಖ್ಯವಾದವು.

## ಸ್ಥಿರವಲ್ಲದ ಕ್ಷೇತ್ರ

ಚಲನಚಿತ್ರ ಕ್ಷೇತ್ರದ ಕೆಲಸವೆಂದರೆ ನಡೆದಷ್ಟೇ ನಾಣ್ಯ ಅನ್ನುತ್ತಿದ್ದರು ಕಾಳಪ್ಪನವರು. ಚಿತ್ರ ಉತ್ತಮವಾಗಿ ನಡೆದು, ಹಾಕಿದ ಬಂಡವಾಳ ಬಂದರೆ ಆ ಚಿತ್ರಕ್ಕಾಗಿ ದುಡಿದವರೆಲ್ಲರಿಗೂ ತಕ್ಕ ಸಂಭಾವನೆ ಸಿಗುತ್ತಿತ್ತು. ಇಲ್ಲವೇ ಅಂದಂದು ಕೊಡುವ ಊಟ ಮತ್ತು ಬಂದು

ಹೋಗುವ ಅಲ್ಪ ವೆಚ್ಚ ಇವುಗಳಲ್ಲೇ ತೃಪ್ತಿಪಡಬೇಕು. ಇದನ್ನು ನೆಚ್ಚಿ ಬದುಕು ಸಾಗಿಸುವಂತಿಲ್ಲ. ಇನ್ನಾರಾದರೂ ಹೊಸ ಕಲಾವಿದ ಸಿಕ್ಕರೆ ಹಳಬನಿಗೆ ಅಂದೇ ಟಿಕೇಟು ಕೊಟ್ಟು ಮನೆಗೆ ಕಳುಹಿಸುತ್ತಿದ್ದರು. ಗ್ಯಾರಂಟಿ ಇಲ್ಲದ ಕಸುಬು. ಮುಳ್ಳು ತಂತಿಯ ಮೇಲೆ ನಡೆದಂತೆ ಅನ್ನುತ್ತಿದ್ದರು. ಈ ವಾತಾವರಣ ಅಂದು ಮಾತ್ರವಲ್ಲ ಇಂದಿಗೂ ಇದೆ. ಚಲನಚಿತ್ರ ಮಾಧ್ಯಮವೇ ಹಾಗೆ. ಈ ಕಾರಣದಿಂದ ಕಾಳಪ್ಪನವರು ಮತ್ತೇ ವಾಣಿಜ್ಯ ಕಲೆ ಮಾಡಲು ಆರಂಭಿಸಿದರು. ಇವರಿಗೆ ಒಂದು ರೀತಿಯ ಆಂತರಿಕ ತುಮುಲವಿತ್ತು. ನಾನು ಕಲಿತ ಕಲೆಯನ್ನು ಇತರರಿಗೂ ಕಲಿಸಬೇಕು. ಈ ವಿದ್ಯಾದಾನ ಮಾಡಬೇಕೆಂಬ ಹಂಬಲವನ್ನು ಒಂದು ದಿನ ಅವರ ಹಿರಿಯ ಸಹಪಾಠಿಗಳಾದ ರಘೋತ್ತಮ ಪುಟ್ಟಿಯವರಲ್ಲಿ ತೋಡಿಕೊಂಡರು. ನಿನ್ನ ಉದ್ದೇಶ ಒಳ್ಳೆಯದಾದರೂ ಅದಕ್ಕಾಗಿಯೇ ವಿಶಾಲವಾದ ಕೋಣೆ, ಪಾಠ ಸಲಕರಣೆಗಳು ಇವೆಲ್ಲಾ ಒದಗಿಸಲು ನಿನ್ನಲ್ಲಿ ಏನಿದೆ, ಶಾಲೆಮಾಡಿ ಸಂಸಾರ ನಡೆಸಲು ಶಕ್ಯವೇ. ಇದು ನಿನ್ನಿಂದ ಸಾಧ್ಯವಲ್ಲವೆಂದು ಹೇಳಿದುದನ್ನು ದೀರ್ಘವಾಗಿ ಯೋಚಿಸಿ, ಒತ್ತಾಸೆಯಿಲ್ಲದ ಮೇಲೆ ಆಸೆಯಿಂದಾರಂಬಿಸುವುದಕ್ಕಿಂತ ಸುಮ್ಮನಿರುವುದೇ ಮೇಲೆಂದು ತೀರ್ಮಾನಿಸಿ ತಮ್ಮ ವಾಣಿಜ್ಯ ಕಲೆಯನ್ನೇ ಮುಂದುವರೆಸಿದರು.

### ಕಲಾಶಿಕ್ಷಣಕ್ಕೆ ಪ್ರೇರಣೆ

ಕೆಲ ಕಾಲಾನಂತರ ಹಲವಾರು ಸಂಸ್ಥೆಕಟ್ಟಿ ಬೆಳೆಸಿದ ಜಿ.ಡಿ. ಅಯ್ಯಂಗಾರ್ ಎಂಬುವರು ತಮ್ಮ ಶಾಲೆಯ ನಾಮಫಲಕ ಬರೆಸಲು ಬಂದರು. ನಂತರ ಇವರ ಮೂಲಕ ಹಲವಾರು ರಾಷ್ಟ್ರನಾಯಕರ ಹಾಗೂ ಅವರ ಸಂಸ್ಥೆ ಪೋಷಕರ ಮುಖ ಚಿತ್ರವನ್ನು ಬರೆಸಿದರು. ಈ ಕಲಾಕೃತಿಗಳ ರಚನಾಶೈಲಿಯನ್ನು ನೋಡಿ ಆನಂದಿಸಿದ ಅಯ್ಯಂಗಾರರು "ನಿಮ್ಮ ಕಲೆಯೇನೋ ಒಳ್ಳೆಯದು. ಆದರೆ ನಿಮ್ಮೊಡನೆಯೇ ಇದು ಅವಸಾನವಾಗಬೇಕೆ. ನಾಲ್ಕಾರು ಜನಕ್ಕೆ ಹೇಳಿಕೊಡಬೇಡವೇ" ಎಂದು ಪ್ರಶ್ನಿಸಿದರು. ಕಾಳಪ್ಪನವರೊಳಗಡಗಿದ್ದ ಮನೋಭಿಲಾಷೆ ಮತ್ತೆ ಚಿಗುರೊಡೆದಂತಾಗಿ, ನೀವು ಹೇಳುವುದೇನೋ ಸರಿ, ಅದಕ್ಕೆ ತಕ್ಕ ಪಾಠೋಪಕರಣ, ಪೀಠೋಪಕರಣ ಬೇಡವೇ? ವಿದ್ಯಾರ್ಥಿಗಳು ಬರುತ್ತಾರೆಯೇ ಇತ್ಯಾದಿ ಪ್ರಶ್ನೆಗಳನ್ನು ಕೇಳಿದರು. ಕಲಿಸಬೇಕೆಂಬ ಛಲ ನಿಮ್ಮಲ್ಲಿದ್ದರೆ ಅವೆಲ್ಲವೂ ತಾನಾಗಿಯೇ ಬರುತ್ತವೆ. ಸಂಕಲ್ಪ ಮಾಡದೇ ಸಾಧ್ಯವಾಗುವುದಾದರೂ ಹೇಗೆ ಎಂದು ಮರುಚಿಂತನೆಗೀಡುಮಾಡಿದರು. ನೀವು ಬೆಂಬಲಿಸುವುದಾದರೇ ಪ್ರಯತ್ನಿಸುತ್ತೇನೆಂದ ಕಾಳಪ್ಪನವರು, ತಾವು ಕಮರ್ಶಿಯಲ್ ಸ್ಟುಡಿಯೋ ಮಾಡಿಕೊಂಡಿದ್ದ ಮೈಸೂರಿನ ನೂರಡಿ ರಸ್ತೆಯ ಜೈನ್ ಬಿಲ್ಡಿಂಗ್ ಎಂದು ಖ್ಯಾತಿಯಾಗಿದ್ದ ೨ನೇ ಮಹಡಿಯಲ್ಲಿಯೇ ಕಲಾ ತರಗತಿ ಆರಂಭಿಸಿಬಿಟ್ಟರು. ಹಲವಾರು ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದ ಜಿ.ಡಿ. ಅಯ್ಯಂಗಾರರು ಬೆನ್ನೆಲುಬಾದರು. ಕೆಲ ಕಾಲಾನಂತರದಲ್ಲಿ ಕಲಾವಿದ ಅಜೀಜ್‌ರ ಸ್ನೇಹವಾಗಿ ಕಾಳಪ್ಪನವರ ಕಲಾಚಿಂತನೆಗೆ ಸಹಕಾರಿಯಾದರು.

ಕಿರಿದಾದ ಆ ಜಾಗದಲ್ಲಿ ಕುಳಿತುಕೊಳ್ಳಲು ಶಕ್ಯವಾಗುತ್ತಿದ್ದುದು ಕೆಲವೇ ಜನರಿಗೆ ಮಾತ್ರ. ಶುಲ್ಕ ಎರಡು ಅಥವಾ ಮೂರು ರೂ. ಅತಿ ಹೆಚ್ಚೆಂದರೆ ಐದು ರೂ. ಕೆಲ ತಿಂಗಳ ನಂತರ ಸಮಾನ ಮನಸ್ಕರನ್ನು ಸೇರಿಸಿ ಅದಕ್ಕೊಂದು ಸಮಿತಿಯ ಸ್ವರೂಪ ನೀಡಿ 'ಕಲಾನಿಕೇತನ ಸ್ಕೂಲ್ ಆಫ್ ಆರ್ಟ್ಸ್' ಎಂಬ ಶಿರೋನಾಮೆ ಇಟ್ಟು ೧೯೫೫ರಲ್ಲಿ ನೊಂದಾಯಿಸಲ್ಪಟ್ಟ (Registered) ಸಂಸ್ಥೆಯನ್ನಾಗಿಸಿದರು. ಸರ್ಕಾರಕ್ಕೆ ಮನವಿ ಸಲ್ಲಿಸಿ ಶಿಕ್ಷಣ ಇಲಾಖೆಯಿಂದ

ಮಾನ್ಯತೆ ದೊರಕಿಸಿಕೊಂಡು ಲೋಯರ್ ಮತ್ತು ಹೈಯರ್ ಗ್ರೇಡ್ ಪರೀಕ್ಷೆಗೆ ಕಟ್ಟಿಸಲು ಅನುಕೂಲ ಮಾಡಿಕೊಂಡರು. ಜಿ.ಡಿ. ಅಯ್ಯಂಗಾರ್ಯರು ಸಂಸ್ಥೆಯ ಚಾಲನಾಶಕ್ತಿಯಾಗಿದ್ದರು. ರಘೋತ್ತಮ ಪುಟ್ಟಿಯವರು ಸಕಲ ಪತ್ರವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು. ಕಾಳಪ್ಪನವರು ಅದರ ಪ್ರಾಚಾರ್ಯರಾಗಿ ಕೇಂದ್ರಬಿಂದುವಾಗಿದ್ದರು. ವರ್ಷ ತುಂಬಿದ ಬಳಿಕ ಮತ್ತೊಂದು ವರ್ಷಕ್ಕೆ ಮಾನ್ಯತೆ ನವೀಕರಣ. ಮುಂದಿನ ವರುಷದ ಆರಂಭಕ್ಕೆ ಅನುಮತಿ. ಹೀಗೆ ಪ್ರತಿವರ್ಷ ಮಾಡಬೇಕಾಗಿತ್ತು. ಈ ಕ್ರಮ ಈಗಲೂ ಚಾಲ್ತಿಯಲ್ಲಿದೆ. ಡಿ.ಟಿ.ಸಿ. ಡಿಪ್ಲೊಮಾ, ಎ.ಎಂ. ಹೀಗೆ ಐದು ವರ್ಷದ ಶಿಕ್ಷಣಕ್ಕೆ ಕ್ರಮಕ್ರಮವಾಗಿ ಅನುಮತಿ ದೊರಕಿಸಿಕೊಂಡರು.

## ಸಮಕಾಲೀನ ಕಲಾಶಾಲೆಗಳು

ಆದರೆ ಈ ನವೀಕರಣ, ಅನುಮತಿಗಾಗಿ ವರ್ಷ ವರ್ಷವೂ ಅನೇಕ ತೊಂದರೆ ಅನುಭವಿಸಬೇಕಾಯಿತು. ಸರಿಯಾದ ಅಸ್ತಿತ್ವವೇ ಇಲ್ಲದ ಕಲಾಶಿಕ್ಷಣವಿದಾಗಿತ್ತು. ಮೈಸೂರಿನಲ್ಲಿದ್ದಂತಹ ಕಲಾಶಾಲೆ ಎಂದರೆ ರಾಜಾಶ್ರಯ ಪಡೆದ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆ. ಇದರ ಆರಂಭ ಕಾಲ ೧೯೧೩. ಭಾರತದ ಇತರೆಡೆ ಅಂದರೆ ರವೀಂದ್ರನಾಥ ಠಾಗೂರರು ತಮ್ಮ ಶಾಂತಿನಿಕೇತನದಲ್ಲಿ ಕಲಾವಿಭಾಗ ಪ್ರಾರಂಭಿಸಿದುದು ೧೯೨೦ರಲ್ಲಿ. ೧೮೫೭ರಲ್ಲೇ ಆರಂಭವಾದ ಮುಂಬೈ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಆಗ್ಗೆ ಅತೀ ಪ್ರಸಿದ್ಧ ಸ್ಥಳವಾಗಿತ್ತು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಮುಂಬೈನತ್ತ ಕಲಾಸಕ್ತರು ಹೋಗುತ್ತಿದ್ದರು. ಆದರೆ ರಾಷ್ಟ್ರಾದ್ಯಂತ ಹೆಚ್ಚಿನ ಸಂಖ್ಯೆಯ ಕಲಾ ವಿದ್ಯಾರ್ಥಿಗಳು ಬರುತ್ತಿದ್ದರಿಂದ ಕರ್ನಾಟಕದ ಕಲಾಕಾಂಕ್ಷಿಗಳಿಗೆ ಅವಕಾಶ ಸಿಗುವುದು ಕಷ್ಟವೆನಿಸುತ್ತಿತ್ತು. ಆ ಸಂದರ್ಭದಲ್ಲಿ ಡಿ.ಜಿ. ಬಡಿಗೇರ್ ಮತ್ತು ದಂಡಾವತಿ ಮಠರವರು ಮುಂಬೈನಲ್ಲಿ ಕೂಡಿ ಸ್ಥಾಪಿಸಿದ ನೂತನ ಕಲಾಮಂದಿರ ಆರಂಭವಾದದ್ದು ೧೯೩೨ರಲ್ಲಿ. ಅದು ಬಿಟ್ಟರೆ ಕರ್ನಾಟಕದಲ್ಲಿ ಮೊದಲು ಆರಂಭಿಸಿದ್ದು ಬೆಂಗಳೂರಿನಲ್ಲಿ ಅ.ನ.ಸುಬ್ಬರಾಯರ ನೇತೃತ್ವದ ಕಲಾಮಂದಿರ ಸ್ಥಾಪನೆ ೧೯೧೯. ತದನಂತರದಲ್ಲಿ ಹಾಲಭಾವಿಯವರು ಜೆ.ಜೆ. ಸ್ಕೂಲ್‌ನಲ್ಲಿ ಕಲಾಶಿಕ್ಷಣ ಪೂರೈಸಿ ಬಂದು ಧಾರವಾಡದಲ್ಲಿ ೧೯೩೫ರಲ್ಲಿ ಕಲಾಶಾಲೆ ಆರಂಭಿಸಿದರು. ಅನಂತರ ಗದಗನಲ್ಲಿ ಟಿ.ಪಿ.ಅಕ್ಕಿಯವರು ೧೯೪೭ರಲ್ಲಿ ತಮ್ಮದೇ ಆದ ಕಲಾಶಾಲೆಗೆ ಚಾಲನೆ ನೀಡಿದರು. ಹೀಗೆ ಬೆರಳೆಣಿಕೆಯಷ್ಟು ಕಲಾ ಬೋಧನಾಸಂಸ್ಥೆಗಳು ತಲೆಎತ್ತಿದವು. ಆಗ್ಗೆ ಮೈಸೂರಿನಲ್ಲಿ ಶಿಲ್ಪಿ ಸಿದ್ಧಾಂತಿ ಸಿದ್ದಲಿಂಗಸ್ವಾಮಿಗಳು ಗುರುಕುಲವನ್ನಾರಂಭಿಸಿದರು. ಚಿತ್ರ ಮತ್ತು ಶಿಲ್ಪಗಳ ಅಭ್ಯಾಸವನ್ನು ಜೊತೆ ಜೊತೆಯಲ್ಲಿಯೇ ಮಾಡಬೇಕಾಗಿತ್ತು. ಗುರುಕುಲ ಪದ್ಧತಿಯಾದ್ದರಿಂದ ಕೆಲವೇ ಮಂದಿ ಕಲಿಯಲು ಬರುತ್ತಿದ್ದರು. ಉತ್ತರಕರ್ನಾಟಕದ ಪ್ರಮುಖ ವಾಣಿಜ್ಯ ಸ್ಥಳವಾದ ಹುಬ್ಬಳ್ಳಿಯಲ್ಲಿ ಎಂ.ವಿ. ಮಿಣಜಿಗಿಯವರು ೧೯೫೧ರಲ್ಲಿ 'ಕರ್ನಾಟಕ ಆರ್ಟ್ಸ್ ಎಜುಕೇಶನ್' ಎಂಬ ಸಂಸ್ಥೆ ಮೂಲಕ ಕಲಾಶಾಲೆ ಆರಂಭಿಸಿದರು. ಕ್ರಮೇಣ ಈ ಸಂಸ್ಥೆ ತನ್ನ ನಾಮಧೇಯದ ಅಸ್ತಿತ್ವ ಕಳೆದುಕೊಂಡು ೧೯೬೬ರಲ್ಲಿ ವಿಜಯ ಮಹಾಂತೇಶ ಕಲಾ ಮಹಾವಿದ್ಯಾಲಯವಾಗಿ ಮಾರ್ಪಟ್ಟಿತು. ಅದಕ್ಕೆ ಪೋಷಕರಾಗಿ ಅಲ್ಲಿನ ಪ್ರಸಿದ್ಧ ಮಹಾಪುರುಷರಾದ ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರುಗಳು ಬೆನ್ನೆಲುಬಾದರು.ಇಂತಹ ಸಂದರ್ಭದಲ್ಲಿ ೧೯೫೪ರಲ್ಲಿ ಕಾಳಪ್ಪನವರು ಧೈರ್ಯದಿಂದ ತಮ್ಮ ಖಾಸಗಿ ಕಲಾಶಾಲೆ ಆರಂಭಿಸಿದರು.

## ಅಲ್ಪ ಅನುದಾನ

ಹೀಗೆ ಬೆಳೆದ ಕರ್ನಾಟಕದ ಕಲಾ ಖಾಸಗಿ ಸಂಸ್ಥೆಗಳು ಹಲವಾರು ವರ್ಷ ನಡೆದ ನಂತರ ಅನುದಾನ ಪಡೆಯಲು ಅರ್ಹವಾದವು. ಆಗಿನ ಅನುದಾನವೆಂದರೆ ತಿಂಗಳಿಗೆ ಎರಡು ಅಂಕಿ ಒಳಗಿನ ಧನಸಹಾಯ. ಯಾರೊಬ್ಬರಿಗೂ ಸಾಲದಾದ ಈ ಹಣ ಸಹಾಯದಿಂದ ಏನೂ ಮಾಡಲು ಸಾಧ್ಯವಿಲ್ಲವಾಗಿತ್ತು. ಕಾಳಪ್ಪನವರಿಗೆ ಸಿಗುತ್ತಿದ್ದುದು ತಿಂಗಳಿಗೆ ಕೇವಲ ಇಪ್ಪತ್ತೈದು ರೂ. ಮಾತ್ರ. ತಾವು ಹೊರಗೆ ದುಡಿದು ಕಲಾಶಾಲೆಯನ್ನು ನಡೆಸುತ್ತಿದ್ದರು. ಕಲಾವಿದ್ಯಾರ್ಥಿಗಳಿಗೆ ಪ್ರೋತ್ಸಾಹಿಸಬೇಕೆಂಬ ಉದ್ದೇಶದಿಂದ ಚಲನಚಿತ್ರದ ಬೆನಿಫಿಟ್ ಷೋ ಮಾಡಲು ನಿರ್ಧರಿಸಿದರು. ರಾಜಕುಮಾರ್ ಅಭಿನಯದ 'ಕುಲವಧು' ಚಿತ್ರಪ್ರದರ್ಶಿಸಿ ಬಂದ ಅಲ್ಪ ಲಾಭದಿಂದ ಪಠ್ಯ ಸಲಕರಣೆಗಳನ್ನು ಕೊಂಡರು. ೧೯೬೭ರ ಸುಮಾರಿನಲ್ಲಿ ನೂರಡಿ ರಸ್ತೆಯಲ್ಲಿದ್ದ ತಮ್ಮ ಕಲಾ ನಿಕೇತನವನ್ನು ಹಾರ್ಡ್‌ವಿಕ್ ಹೈಸ್ಕೂಲ್ ಕಟ್ಟಡಕ್ಕೆ ವರ್ಗಾಯಿಸಿದರು. ಅದೇ ವರ್ಷವೇ ಎಂ.ಟಿ.ವಿ. ಆಚಾರ್ಯರು ಅಂಚೆ ಮೂಲಕ ಕಲಾಶಿಕ್ಷಣ ಕೊಡುವ ಮಹತ್ತರ ಯೋಜನೆಯನ್ನು ಬೆಂಗಳೂರಿನಲ್ಲಿ ಆರಂಭಿಸಿದ್ದರು. ಕಾಳಪ್ಪನವರು ಸುಮಾರು ಹದಿನಾರು ವರ್ಷಗಳ ಕಾಲ ಹಾರ್ಡ್‌ವಿಕ್ ಹೈಸ್ಕೂಲಿನಲ್ಲಿ ಕಲಾಶಾಲೆ ನಡೆಸಿ ೧೯೮೦ರಲ್ಲಿ ಬಹಳ ಒಳ್ಳೆಯ ರೀತಿಯ ಬೆಳ್ಳಿಹಬ್ಬ ಆಚರಿಸಿದರು. ಆ ಸಂದರ್ಭದಲ್ಲಿ ಸಂಸ್ಥೆಗಾಗಿ ಸಹಕರಿಸಿದ ಮತ್ತು ಮೈಸೂರಿನ ಹಿರಿಯ ಕಲಾವಿದರನ್ನು ಗೌರವಿಸಿದರು.

## ವಿದ್ಯಾರ್ಥಿಮಿತ್ರ

ಕಾಳಪ್ಪನವರ ವಿಶೇಷಗುಣವೆಂದರೆ ವೃತ್ತಿ ಮತ್ಸರವಿರಲಿಲ್ಲ. "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು ಸರ್ವಜ್ಞ" ಎಂಬ ಸರ್ವಜ್ಞನ ನುಡಿಯಂತೆ ಸಹಕಲಾವಿದರನ್ನು ಗುರ್ತಿಸುವ, ಗೌರವಿಸುವ ಸದ್ಗುಣವಿತ್ತು. ಹಾಗೆಯೇ ವಿದ್ಯಾರ್ಥಿಗಳಿಗಂತೂ ಅವರು ಗುರುವಿನಂತೆ, ಸ್ನೇಹಿತರಂತೆ ಸಂದರ್ಭೋಚಿತವಾಗಿ ವರ್ತಿಸುತ್ತಿದ್ದರು. ಹೊರಗೆ ಭೂದೃಶ್ಯ ಬರೆಯಲು ವಿದ್ಯಾರ್ಥಿಗಳನ್ನು ಕರೆದೊಯ್ಯುತ್ತಿದ್ದ ಸಂದರ್ಭದಲ್ಲಿ ತಮ್ಮ ಸ್ವಂತ ಹಣದಿಂದ ಬೆಳಗಿನ ಉಪಹಾರ ಕೊಡಿಸುತ್ತಿದ್ದರು. ಅವರಿಗೆ ಬಣ್ಣ, ಬ್ರೆಷ್ ತಾವೇ ನೀಡುತ್ತಿದ್ದರು. ಕೆಲ ವಿದ್ಯಾರ್ಥಿಗಳು ಹಳ್ಳಿಯಿಂದ ಬಂದಿದ್ದು ಅವರಿಗೆ ಊಟ ವಸತಿ ಸಹ ತಮ್ಮ ಮನೆಯಲ್ಲಿಯೇ ಮಾಡಿಕೊಡುತ್ತಿದ್ದರು. ಬೇಸರಪಟ್ಟುಕೊಳ್ಳದೇ ತಮ್ಮ ವೈಯಕ್ತಿಕ ತೊಂದರೆಗಳನ್ನೆಲ್ಲಾ ಬದಿಗೊತ್ತಿ ವಿದ್ಯಾರ್ಥಿಗಳ ಪ್ರವರ್ಧಮಾನದತ್ತ ಗಮನಹರಿಸುತ್ತಿದ್ದರು.

## ಶಿಷ್ಯಸಂಪತ್ತು

ಇವರ ಶಿಷ್ಯ ಸಮೂಹ ದೊಡ್ಡದು. ಕೆಲವರು ರಾಜ್ಯಮಟ್ಟದಲ್ಲಿ ಖ್ಯಾತಿಗಳಿಸಿದ್ದಾರೆ. ಸರ್ಕಾರದ ವಿವಿಧ ಉದ್ಯೋಗದಲ್ಲಿದ್ದಾರೆ. ಕರ್ನಾಟಕದ ಕಲಾವಲಯದಲ್ಲಿ ಗುರುತಿಸುವ ಮಟ್ಟದಲ್ಲಿ ಬೆಳೆದವರಲ್ಲಿ ಕೆಲವರು ಮುಖ್ಯರೆನಿಸುತ್ತಾರೆ. ಭಾವಚಿತ್ರ ರಚನೆಯಲ್ಲಿ ಸಿದ್ಧಹಸ್ತರಾಗಿದ್ದ ಎಚ್.ಎಸ್.ಪಾರಕ್, ಅಕಾಡೆಮಿ ಸದಸ್ಯರಾಗಿ ಹಲವಾರು ಪ್ರದರ್ಶನ ಮಾಡಿ ಈಗ ಅಮೇರಿಕಾದಲ್ಲಿರುವ ಚಾಂದನಿ ಪವಾರ್, ತನ್ನದೇ ಆದ ಕಲಾಶಾಲೆ ಆರಂಭಿಸುವ ಮೂಲಕ ಶಿಷ್ಯರನ್ನು ತಯಾರುಮಾಡುತ್ತಿದ್ದ ಪ್ರಮಿಳಾ ಚೋಳಯ್ಯ, ಸಾಂಪ್ರದಾಯಿಕ

ಚಿತ್ರಕಲಾತಜ್ಞೆ, ಪದ್ಮಾಪುಬ್ಬಿಕರ್, ರಾಮಕೃಷ್ಣ ಶಾಲೆಯ ಕಲಾಉಪಾಧ್ಯಾಯರಾಗಿರುವ ಅನಂತ ಪದ್ಮನಾಭ, ರವಿವರ್ಮ ಸ್ಕೂಲ್ ಆಫ್ ಆರ್ಟ್ಸ್ ಪ್ರಾರಂಭಿಸಿದ ಬಿ.ಕೆ. ಮುತ್ತಪ್ಪ ಇವರಲ್ಲದೆ, ಶಿಕ್ಷಣ ಕ್ಷೇತ್ರದಲ್ಲಿರುವ ಶ್ರೀನಿವಾಸಾಚಾರಿ, ಎಲ್. ದೇವಣ್ಣ, ಎಂ.ಕೆ. ಮುತ್ತಪ್ಪ ಮುಂತಾದವರನ್ನು ಹೆಸರಿಸಬಹುದಾಗಿದೆ.



## ಮಕ್ಕಳ ಮಮಕಾರ

ಮಕ್ಕಳ ಬಗ್ಗೆ ಅತೀವ ಕಾಳಜಿಯುಳ್ಳ ಕಾಳಪ್ಪನವರು ಮೈಸೂರಿನಲ್ಲಿ ಪ್ರಥಮವಾಗಿ ಸ್ಥಳದಲ್ಲೇ ಚಿತ್ರಬಿಡಿಸುವ ಸ್ಪರ್ಧೆಯನ್ನು ಏರ್ಪಡಿಸಿದರು. ಅವರಿವರನ್ನು ಬೇಡಿಯಾದರೂ ತಂದು ಮಕ್ಕಳಿಗೆ ಬಹುಮಾನ ನೀಡಿ ಬೆನ್ನು ತಟ್ಟುತ್ತಿದ್ದರು. ಇದನ್ನು ಹಲವಾರು ವರ್ಷ ನಡೆಸಿಕೊಂಡು ಬಂದರು. ನಂತರದಲ್ಲಿ ಇದು ಪ್ರಚಾರವಾದಂತೆ ವಿವಿಧ ಸಂಘ ಸಂಸ್ಥೆಗಳವರು ವಾಣಿಜ್ಯೀಕರಣ ಮಾಡಲೆತ್ನಿಸಿದಾಗ ತಮ್ಮ ಯೋಜನೆಯನ್ನು ಕೈಬಿಟ್ಟರು. ಕಾಳಪ್ಪನವರು ಬರುವಂತಹ ಮಕ್ಕಳಿಗೆ ಯಾವ ರೀತಿಯ ಶುಲ್ಕ ಪಡೆಯದೇ ಸಾಧ್ಯವಾದ ಸಲಕರಣೆಗಳನ್ನು ತಾವೇ ಒದಗಿಸುತ್ತಿದ್ದರೆಂಬುದೇ ಅವರ ವಿಶೇಷ ಗುಣವಾಗಿತ್ತು.

## ಸಹಾಯಹಸ್ತ

ಕಾಳಪ್ಪನವರ ವಿಶೇಷ ಗುಣವೆಂದರೆ ಅವರಿಗಿದ್ದ ಸಾಮಾಜಿಕ ಪ್ರಜ್ಞೆ, ಸಹಕಲಾವಿದರ ಕಷ್ಟಸುಖಗಳಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಿದ್ದ ನಿಲುಮೆ ದೊಡ್ಡದು. ಅದಕ್ಕೊಂದು ಉದಾಹರಣೆಯೆಂದರೆ ಅರಮನೆ ಕಲಾವಿದರೆಂದೇ ಪ್ರಸಿದ್ಧಿಯಾದ ಶಂಕರರಾಜುರವರು ಅರಮನೆ ಆಶ್ರಯತಪ್ಪಿ, ಗೃಹಸೌಖ್ಯದಿಂದ ವಂಚಿತರಾಗಿದ್ದು ಕಾಳಪ್ಪನವರನ್ನು ಒಮ್ಮೆ ಭೇಟಿ ಮಾಡಿ ತಮ್ಮ ಮಾನಸಿಕ ವ್ಯತ್ಯಯಗಳನ್ನು ಹೇಳಿಕೊಳ್ಳಬೇಕೆಂಬ ಹಂಬಲದಿಂದ ಸ್ಟುಡಿಯೋಗೆ ಬಂದರು. ಅದಾದರೋ ಮಹಡಿ ಏರಬೇಕು. ಬಹು ಪ್ರಯಾಸದಿಂದ ಬಂದರು. ಹಲವಾರು ತೊಂದರೆಗಳಿಂದ ಅನ್ನ ಆಹಾರಾದಿಗಳಿಲ್ಲದೇ ಕೃಷವಾಗಿದ್ದರು. ಅವರ ಮಾತಿನ ಇಂಗಿತವನ್ನರಿತ ಕಾಳಪ್ಪನವರು ತಡಮಾಡದೇ ಹೋಗಿ ಹೋಟೆಲ್‌ನಿಂದ ತಿಂಡಿ ತಂದುಕೊಟ್ಟು ಉಪಚರಿಸಿದರು. ಜೊತೆಗೆ ಅವರನ್ನು ಬೀಳ್ಕೊಡುವಾಗ ಹಣಕೊಟ್ಟು ಕಳಿಸಿದರು. ಅಂದಿನ ನೈಜ ಪರಿಸ್ಥಿತಿ ಹೇಗಿತ್ತೆಂದರೆ ಕಾಳಪ್ಪನವರ ಪುತ್ರ ನಾಗೇಶ ತೀವ್ರ ಅನಾರೋಗ್ಯವಾಗಿ ಅಂದು ಅವನನ್ನು ಆಸ್ಪತ್ರೆಗೆ ದಾಖಲು ಮಾಡಬೇಕಾಗಿತ್ತು. ಅದಕ್ಕಾಗಿಯೇ ಬೆಳಗ್ಗಿನಿಂದಲೂ ಒಂದು ಬೋರ್ಡ್ ಬರೆದು ಹದಿನೈದು ರೂ. ಸಂಪಾದಿಸಿದ್ದರು. ಅದನ್ನು ತೆಗೆದುಕೊಂಡು ಮನೆಗೆ ಹೋಗುವವರಿದ್ದರು. ತಮ್ಮ ಸಹಕಲಾವಿದರ ಪರಿಸ್ಥಿತಿಯನ್ನು ನೋಡಿದ ಇವರಿಗೆ ಮನೆಯ ಸಂಕಷ್ಟವನ್ನು ಮರೆತು ಸಂಪಾದಿಸಿದ ಅಂದಿನ ಹದಿನೈದು ರೂ. ಹಣವನ್ನು ಅವರಿಗಾಗಿ ಖರ್ಚು ಮಾಡಿ ಬರಿಕೈಯಲ್ಲಿ ಮನೆಗೆ ಹೋದರು. ಇಂತಹ ಅನೇಕ ಸನ್ನಿವೇಶಗಳು ಎದುರಾಗಿವೆ. ತನ್ನದಕ್ಕಿಂತ ಅನ್ಯರ ಬಗೆಗೆ ಏಕಿಷ್ಟು ಹುಚ್ಚು ಎಂದು ಮೂದಲಿಸಿದವರು ಉಂಟು. ಇಂತಹ ಹೃದಯ ವೈಶಾಲ್ಯದ ಗುಣಗಳನ್ನು ಕಾಳಪ್ಪನವರ ಹಿರಿಯ ಸ್ನೇಹಿತರಾದ ರಘೋತ್ತಮ ಪುಟ್ಟಿಯವರು ಆಗಾಗ್ಗೆ ನೆನೆಸಿಕೊಳ್ಳುತ್ತಿರುತ್ತಾರೆ.

## ನಿಲ್ಲಿಸುವ ನಿರ್ಧಾರ

ಇವರಿಗೆ ಮೃದು ಹೃದಯದ ಜೊತೆಗೆ ಕಠಿಣವಾದ ನಿಲುವಿತ್ತು. ತಮಗೆ ಸರಿ ಅನಿಸಿದುದನ್ನು ನಿರ್ಬೀಡೆಯಿಂದ ವ್ಯಕ್ತಪಡಿಸುತ್ತಿದ್ದರು. ಇದರಿಂದಾಗಿಯೇ ನಿಷ್ಠೂರಗಳಾದರೂ ಎದೆಗುಂದುತ್ತಿರಲಿಲ್ಲ. ಕಲಾಶಿಕ್ಷಕರಿಗಾದರೂ ಪೂರ್ಣವಾದ ಸಂಬಳಕೊಡಬೇಕೆಂದು ಸರ್ಕಾರಕ್ಕೆ ಅನೇಕ ಮನವಿ ಸಲ್ಲಿಸಿದರು. ಅಧಿಕಾರಿಗಳ ಕಛೇರಿ ಮುಂದೆ ಧರಣಿ ನಡೆಸಿದರು. ಲಲಿತಕಲಾ ಅಕಾಡೆಮಿಯ ಮೊರೆ ಹೋದರು. ರಾಜಕಾರಣಿಗಳ, ಮಂತ್ರಿಮಹೋದಯರ ಮನೆ ತಾಕಿದರು. ಪರಿಣಾಮ ಮಾತ್ರ ಶೂನ್ಯ. ಕೊನೆಗೆ ಬೇಸತ್ತ ಕಾಳಪ್ಪನವರು ಇನ್ನಾವ ಹೊಸ ಪ್ರಾಚಾರ್ಯರನ್ನು ನೇಮಕ ಮಾಡಿಕೊಂಡು ಇವರಿಗೆಲ್ಲಿಂದ ಸಂಬಳ ಕೊಡುವುದೆಂದು ನಿರ್ಧರಿಸಿ, ತಮ್ಮ ಪ್ರಾಚಾರ್ಯ ಹುದ್ದೆಯ ಅವಧಿ ಮುಗಿದೊಡನೆಯೇ ೧೯೮೩ರಲ್ಲಿ ಅದನ್ನು ನಿಲ್ಲಿಸುವ ವಿಚಾರಮಾಡಿದರು. ಕೆಲವು ವರ್ಷಗಳು ಸ್ಥಗಿತಗೊಂಡಿದ್ದ ಕಲಾಶಾಲೆಯನ್ನು ಖಾಸಗಿಯವರಿಗೆ ವಹಿಸಿಕೊಟ್ಟರು. ನಂತರ ಇಂದಿಗೂ ಶ್ರೀ ಕಲಾನಿಕೇತನ ಎಂಬ ಹೆಸರಿಂದಲೇ ಮುಂದುವರೆಯುತ್ತಿರುವುದು ಸಂತೋಷದ ಸಂಗತಿ.

## ಹವ್ಯಾಸಿಗಳಿಗೆ ಅನುಕೂಲ

ಕಾಳಪ್ಪನವರು ಕಲಾಶಾಲೆ ನಿಲ್ಲಿಸಿದರೂ ಆಸಕ್ತ ಕಲಾವಿದ್ಯಾರ್ಥಿಗಳು ಕಲಾಗುರುವನ್ನು ಬಿಡಲಿಲ್ಲ. ವಿಶೇಷವಾಗಿ ಹೆಣ್ಣುಮಕ್ಕಳು ಸಂಜೆಯಲ್ಲಿ ತರಗತಿ ನಡೆಸಲು ಕೋರಿಕೊಂಡರು. ತತ್ಫಲವಾಗಿ 'ಎಸ್.ಕೆ.ಎಸ್. ಸ್ಕೂಲ್ ಆಫ್ ಆರ್ಟ್' ಎಂಬ ನಾಮಧೇಯದೊಂದಿಗೆ ತಮ್ಮ ಮನೆಯಲ್ಲಿಯೇ ಹವ್ಯಾಸೀ ಕಲಾಶಾಲೆಯನ್ನು ಆರಂಭಿಸಿದರು. ಅದು ಕಾಳಪ್ಪರ ನಿಧನದವರೆಗೂ ನಿರಂತರವಾಗಿ ನಡೆಯುತ್ತಲೇ ಇತ್ತು. ನಲವತ್ತನೇ ವರ್ಷಾಚರಣೆಯನ್ನು ೧೯೯೫ರಲ್ಲಿ ಮಾಡಿ ಅಲ್ಲಿ ಕಲಿತ ವಿದ್ಯಾರ್ಥಿಗಳೆಲ್ಲರ ಚಿತ್ರಪ್ರದರ್ಶನ ಮಾಡಿ ಹಿರಿಯ ಕಲಾವಿದರಿಗೆ, ನಾಡಿನ ಗಣ್ಯರಿಗೆ ಸನ್ಮಾನಿಸಿದರು.

## ಕಲಾಪ್ರದರ್ಶನಗಳು

ಕಾಳಪ್ಪನವರು ಯಾವುದೇ ಚಿತ್ರರಚಿಸಲಿ ಅವುಗಳಿಗೆ ಉತ್ತಮವಾದ ಕರಿಮರದ ಚೌಕಟ್ಟು ಹಾಕಿ ಪ್ರದರ್ಶನಕ್ಕೆ ಕಳಿಸುತ್ತಿದ್ದರು. ಅವಸರಕ್ಕೆ ಏನೋ ಒಂದು ಮಾಡಿ ಕಳಿಸಬೇಕೆಂಬ ಮನೋಭಾವನೆ ಅವರಲ್ಲಿರಲಿಲ್ಲ. ಸ್ಪರ್ಧಾತ್ಮಕ ಮನೋಭಾವನೆ ಅವರಲ್ಲಿತ್ತು.

ಕಾಳಪ್ಪನವರು ೧೯೩೮ರಿಂದಲೇ ಕಲಾಪ್ರದರ್ಶನ ಮಾಡಲು ಆರಂಭಿಸಿದರು. ಮೈಸೂರು ದಸರಾ ಕಲಾಪ್ರದರ್ಶನದಲ್ಲಿ ಭಾಗವಹಿಸುವುದು ಹೆಮ್ಮೆಯ ವಿಷಯವಾಗಿತ್ತು. ಭಾರತದ ನಾನಾ ಭಾಗಗಳಿಂದ ಕಲಾವಿದರು ತಮ್ಮ ಚಿತ್ರಕಳಿಸುತ್ತಿದ್ದರು. ಮೈಸೂರಿನ ರೈಲ್ವೆ ನಿಲ್ದಾಣಕ್ಕೆ ಸಮೀಪವಾಗಿದ್ದ ಮೆಡಿಕಲ್ ಕಾಲೇಜ್ ಪಕ್ಕದ ಕಟ್ಟಡದಲ್ಲಿಯೇ ಈ ಪ್ರದರ್ಶನ ನಡೆಯುತ್ತಿದ್ದವು. ನವರಾತ್ರಿ ಸಂದರ್ಭದಲ್ಲಿ ಲಕ್ಷೋಪಲಕ್ಷ ಜನ ಬರುತ್ತಿದ್ದರು. ಅರಮನೆ, ಜಂಬೂಸವಾರಿ, ಜಗನ್ ಮೋಹನ ಪ್ಯಾಲೇಸ್ ನೋಡಲು ನೂಕುನುಗ್ಗಲು. ಇಂತಹ ಕಲಾಮಯ, ಸ್ಪರ್ಧಾತ್ಮಕ ಪ್ರದರ್ಶನದಲ್ಲಿ ೧೯೩೮ರಲ್ಲೇ ಜಲವರ್ಣದ ಸಂಯೋಜನ ಚಿತ್ರಕ್ಕೆ ಪ್ರಥಮ ಬಹುಮಾನ ಬಂದಿದ್ದು. ೧೯೫೨ರಲ್ಲಿ ಭಾವಚಿತ್ರರಚನೆಗೆ ಪ್ರಥಮ ಬಹುಮಾನ ಬಂದಿತಲ್ಲದೇ ಅತ್ಯಂತ ಜನಮನ್ನಣೆಗೆ ಪಾತ್ರವಾಯಿತು. ಅಲ್ಲಿಂದ ಪ್ರತಿವರ್ಷ ದಸರಾ ಕಲಾಪ್ರದರ್ಶನದಲ್ಲಿ ಒಂದಲ್ಲಾ ಒಂದು ಬಹುಮಾನಗಳು ಬರುತ್ತಿದ್ದವು.

ಕಾಳಪ್ಪನವರ ಹಿರಿಯ ಕಿರಿಯ ಸಮಕಾಲೀನರಾದ ಎಂ.ಜೆ. ಶುದ್ಧೋದನ, ವಿಷ್ಣುದಾಸ್ ರಾಮದಾಸ್, ರಾಮನರಸಯ್ಯ, ರಘೋತ್ತಮಪುಟ್ಟಿ, ಸೀತಾರಾಂ, ಪಿ.ಆರ್. ತಿಪ್ಪೇಸ್ವಾಮಿ, ಸೋಮಸುಂದರ್, ಚಂದ್ರಶೇಖರ್, ಅನಂತಯ್ಯ, ಬಿ.ಹೆಚ್. ರಾಮಚಂದ್ರ ಮುಂತಾದವರು ಕೂಡಿ ಅಂಬಳೆ ಅಣ್ಣಯ್ಯ ಪಂಡಿತರ ಮನೆಯ ಮಹಡಿಯ ಮೇಲೆ ಪ್ರದರ್ಶಿಸುತ್ತಿದ್ದರು. 'ಚಿತ್ರಕಲಾ ಸಂಘ' ಎಂಬ ನಾಮಧೇಯದಿಂದ ಆರಂಭಿಸಿ, ಅದರ ಕಲಾ ಚಟುವಟಿಕೆಯ ಕೇಂದ್ರಬಿಂದುವಾಗಿ ಕಾಳಪ್ಪನವರು ಆ ಸಂಘದ ಖಜಾಂಜಿ, ಕಾರ್ಯದರ್ಶಿಯಾಗಿ ಸೇವೆಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು.

## ತಾನಾಗಿಯೇ ಬಂದ ಪ್ರಶಸ್ತಿ

ತಮ್ಮದೇ ಆಗಿರುವ ಏಕವ್ಯಕ್ತಿ ಕಲಾಪ್ರದರ್ಶನವು ಲಲಿತಕಲಾ ಅಕಾಡೆಮಿಯ ನೆರವಿನಿಂದ ೧೯೭೫-೭೬ರಲ್ಲಿ ಮಾಡಿದರು. ಇದಲ್ಲದೇ ಈರ್ವರೂ ಮೂವರು ಜೊತೆಗೂಡಿ ಪ್ರದರ್ಶಿಸಿದ್ದಾರೆ. ಭೂದೃಶ್ಯ, ವ್ಯಕ್ತಿಚಿತ್ರ, ಭಾವಚಿತ್ರ, ಸಂಯೋಜನ ಚಿತ್ರಗಳೆಲ್ಲದರಲ್ಲಿ ಸಿದ್ಧಹಸ್ತರಾಗಿದ್ದು ಜಲವರ್ಣ, ತೈಲವರ್ಣ ಯಾವ ಮಾಧ್ಯಮದಲ್ಲಾದರೂ ಲೀಲಾಜಾಲವಾಗಿ ಚಿತ್ರಿಸುತ್ತಿದ್ದರು. ೧೯೮೫ರಲ್ಲಿ ಶ್ರೀಕಲಾನಿಕೇತನದ ಮೂಲಕ ಗುಂಪುಪ್ರದರ್ಶನ ಏರ್ಪಡಿಸಿದ್ದರು. ಅದೇ ವರ್ಷ ವಿಶ್ವಕನ್ನಡ ಸಮ್ಮೇಳನ ಮೈಸೂರಿನಲ್ಲಿ ನಡೆದ ಸಂದರ್ಭದಲ್ಲಿನ ಕಲಾಶಿಬಿರದಲ್ಲಿ ಭಾಗವಹಿಸಿದ್ದರು. ಮತ್ತೊಂದು ಅಪೂರ್ವ ಅವಕಾಶ ಕಾಳಪ್ಪನವರಿಗೊದಗಿತು. ಅಖಿಲಭಾರತ ಕರಕುಶಲ ಮಂಡಲಿಯವರು ನವದೆಹಲಿಯಲ್ಲಿ ನಡೆದ ಪ್ರದರ್ಶನ ಮತ್ತು ಹಿರಿಯ ಕಲಾವಿದರಿಗೆ ಸನ್ಮಾನಗಳಿದ್ದು ಹಲವಾರು ಕಲಾವಿದರು ರಾಜ್ಯಾದ್ಯಂತ ಭಾಗವಹಿಸಿದ್ದರು. ಮೈಸೂರಿನಿಂದ ಕಾಳಪ್ಪ, ವಿಷ್ಣುದಾಸ್ ರಾಮದಾಸ್, ಎಂ.ಈ. ಗುರು, ರಘೋತ್ತಮಪುಟ್ಟಿಯವರು ಗೌರವಾನ್ವಿತರ ಪಟ್ಟಿಯಲ್ಲಿ ಸೇರಿದ್ದರು. ಕಾಳಪ್ಪನವರು ರಚಿಸಿದ ಪೌರಾಣಿಕ ಹಿನ್ನೆಲೆಯ ಚಿತ್ರಗಳು ಅಲ್ಲಿನ ಪ್ರೇಕ್ಷಕರನ್ನು ಹೆಚ್ಚಾಗಿ ಆಕರ್ಷಿಸಿದವು. ಪ್ರಶಂಸೆಗಳಿಸಿದವು.

## ಲಲಿತಕಲಾ ಅಕಾಡೆಮಿ ಶಿಬಿರ

ರಾಜ್ಯ ಲಲಿತಕಲಾ ಅಕಾಡೆಮಿಯು ಅದೇ ಮೊದಲ ಬಾರಿಗೆ ಕಲಾಶಿಬಿರವೊಂದನ್ನು ಏರ್ಪಡಿಸಿತ್ತು (೧೯೭೬). ರಾಷ್ಟ್ರದ ಪ್ರಖ್ಯಾತ ಕಲಾವಿದ ಕೆ.ಕೆ. ಹೆಬ್ಬಾರ್‌ರವರು ಈ ಶಿಬಿರದ ನೇತೃತ್ವ ವಹಿಸಿದ್ದರು. ಶ್ರೀರಂಗಪಟ್ಟಣದ ಕೋಟೆಕೊತ್ತಲು, ಬತೇರಿ, ಶತೃದಾಳಿಯನ್ನು ನಿಯಂತ್ರಿಸಲು ನಿರ್ಮಿಸಿದ ಸುತ್ತಲ ಜಲ, ನೆಲ, ದರಿಯದೌಲತ್ ಇತ್ಯಾದಿ ಚಾರಿತ್ರಿಕ ಘಟನೆಗಳನ್ನು ನೋಡಿ ಕಲಾವಿದನ ಮನಸ್ಸಿನಲ್ಲಾದ ಮಾನಸಿಕ ತಳಮಳವನ್ನು ಚಿತ್ರಿಸುವುದೇ ಆ ಶಿಬಿರದ ಉದ್ದೇಶವಾಗಿತ್ತು. ಮೈಸೂರಿನಿಂದ ಕಾಳಪ್ಪನವರು ಭಾಗವಹಿಸಿ ಟೀಪೂ ಸಾಹಸದ ಹಿನ್ನೆಲೆಯನ್ನಿಟ್ಟು ಚಿತ್ರರಚಿಸಿದರು. ತದನಂತರ ವರ್ಷದಲ್ಲಿ (೧೯೭೭) ಬೆಂಗಳೂರಿನ ಚಿತ್ರಕಲಾ ಪರಿಷತ್ತು ನಡೆಸಿದ ಶಿಬಿರದಲ್ಲಿ ಸಹ ಭಾಗಿಯಾಗಿದ್ದರು. ೧೯೯೩ರಲ್ಲಿ ಮಡಕೇರಿಯಲ್ಲಿ ಲಲಿತ ಕಲಾ ಅಕಾಡಮಿ ಏರ್ಪಡಿಸಿದ ಶಿಬಿರದಲ್ಲೂ ಪಾಲುಗೊಂಡಿದ್ದರು.

## ಭಿತ್ತಿಚಿತ್ರ ನಕಲು

ಭಿತ್ತಿಚಿತ್ರ ನಕಲು ಮಾಡುವುದೊಂದು ಸಾಹಸದ ಕೆಲಸ. ಅಲ್ಲಿನ ಯಥಾವತ್ತತೆಯನ್ನು ಕಾಪಾಡಿಕೊಂಡು ಬರಬೇಕು. ೧೯೭೨ ಮತ್ತು ೧೯೭೮ರಲ್ಲಿ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯರ ಮಠವಿರುವ ಶ್ರವಣಬೆಳಗೊಳದಲ್ಲಿರುವ ಭಿತ್ತಿಚಿತ್ರಗಳ ನಕಲು ಕೆಲಸವನ್ನು ಮಾಡಿದರು. ಜೈನ ತೀರ್ಥಂಕರ ಪಾರ್ಶ್ವನಾಥರ ಹಾಗೂ ರಾಜಕುಮಾರ ನಾಗಕುಮಾರನ ಕಥೆಗೆ ಸಂಬಂಧಿಸಿದ ಚಿತ್ರಗಳವು. ಅವುಗಳು ೧೯ನೇ ಶತಮಾನದ ಆದಿಯಲ್ಲಿ ರಚಿತವಾದುದೆಂದು ತಿಳಿದುಬರುತ್ತದೆಯಾದರೂ ಕಾಲಗರ್ಭಕ್ಕೆ ಸಿಕ್ಕಿ, ವಾಯುಮಾನಗಳ ವೈಪರಿತ್ಯ, ಸ್ಥಳೀಯರ ಅಲಕ್ಷ್ಯ, ಸಂರಕ್ಷಣೆಯ ಅಭಾವದಿಂದಾಗಿ ಅವಸಾನದ ಅಂಚನ್ನು ತಲುಪಿ ಬಣ್ಣ ಕಿತ್ತು ಬರುತ್ತಿತ್ತು. ತನ್ನ ತಾಜಾತನ ಕಳೆದುಕೊಂಡು ಕಳೆಗುಂದಿವೆಯಾದ್ದರಿಂದ ಅವುಗಳ ಯಥಾವತ್ ಚಿತ್ರರಚಿಸುವ ಕೆಲಸವನ್ನು ರಾಜ್ಯ ಲಲಿತಕಲಾ ಅಕಾಡಮಿ ಚಿತ್ರಿಸಿ, ದಾಖಲಿಸಿಕೊಳ್ಳುವ ಕೆಲಸ ಹಮ್ಮಿಕೊಂಡಿತು. ತಾಳ್ಮೆ ಶ್ರದ್ಧೆ ಆಯಾಯ ಪ್ರಮಾಣದ ಚಿತ್ರ ಮತ್ತದರ ಸಮಾನ ವರ್ಣಗಳ ಬಳಸಿ ಚಿತ್ರ ರಚಿಸುವ ಕಲಾವಿದರಿಂದ ಮಾತ್ರ ಈ ಕೆಲಸ



ಸಾಧ್ಯವಾಗುವಂತಹದು. ಈ ದಿಸೆಯಲ್ಲಿ ಕಾಳಪ್ಪನವರು ಅತಿ ಶ್ರದ್ಧೆಯಿಂದ ನಕಲು ಕೆಲಸಮಾಡಿದರು.

ಕಾಳಪ್ಪನವರದು ವೈವಿಧ್ಯಮಯ ಕಲಾರಚನೆ ಎಂಬುದಕ್ಕೆ ಮತ್ತೊಂದು ನಿದರ್ಶನ, ದೆಹಲಿಯಲ್ಲಿ ನಡೆಯುವ ಗಣರಾಜ್ಯೋತ್ಸವ ಪೆರೇಡ್ ಪ್ರದರ್ಶನಕ್ಕೆ ಮೈಸೂರಿನ ಐತಿಹಾಸಿಕ ಹಿನ್ನೆಲೆಯನ್ನು ಬಿಂಬಿಸುವ ಮಹಿಷಾಸುರ ಮರ್ದಿನಿ ಟ್ಯಾಬಲೋ (೧೯೫೦) ಮಾಡಿಕೊಟ್ಟು ಬಹುಮಾನ ಗಳಿಸಿದುದು. ತಿಂಗಳುಗಟ್ಟಲೆ ದೆಹಲಿಯಲ್ಲಿದ್ದು ಅಪರಿಚಿತವಾದ ಆ ಸ್ಥಳದಲ್ಲಿ ಬೇಕಾದ ಸಲಕರಣೆಗಳಿಗೆ ಪರದಾಡಿ ಹಗಲು ರಾತ್ರಿ ಶ್ರಮಿಸಿ ಸಕಾಲದಲ್ಲಿ ಮೆರವಣಿಗೆಗೆ ಸಿದ್ಧಪಡಿಸಿದ ಕಾರ್ಯಶಕ್ತಿ ಅವರದು.

ಹಾಗೆಯೇ ೧೯೫೨ರಲ್ಲಿ ಕನ್ನಡದ ಹೆಸರಾಂತ ಗುಬ್ಬಿ ನಾಟಕ ಕಂಪನಿಯ ೫೦ನೇ ವರ್ಷದ ವಾರ್ಷಿಕೋತ್ಸವ ಅದ್ದೂರಿಯಾಗಿ ನಡೆಸುವ ಯೋಜನೆ ಅವರದಾಗಿತ್ತು. ಆ ಯೋಜನೆಗನುಗುಣವಾಗಿ ರಷ್ಯನ್ ಬ್ಯಾಲೆ, ಚೆಕ್ ಮ್ಯಾಟ್ ಡ್ಯಾನ್ಸ್ ಹಾಗೂ



ಲಲಿತ ಮಹಲ್, ಮೈಸೂರು / *Lalitha Mahal, Mysore*

ಲಂಡನ್, ಜಾವ ಮತ್ತು ಜಪಾನ್ ಡಾನ್ಸ್‌ಗಳ ವಿನ್ಯಾಸಕಾರರಾಗಿ ಪಾಶ್ಚಾತ್ಯ, ಪೌರಾತ್ಯ ನೃತ್ಯಗಳ ಹಿನ್ನೆಲೆಗೊಂದು ಕಲಾ ಆಯಾಮ ಒದಗಿಸಿ ಕಾಳಪ್ಪನವರು ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ತಮಗೊದಗಿದ ಯಾವುದೇ ಅವಕಾಶವನ್ನು ಬಿಡುತ್ತಿರಲಿಲ್ಲ. ತಮಗೆಷ್ಟೇ ಕೌಟುಂಬಿಕ ಸಮಸ್ಯೆಗಳಿದ್ದರೂ ಕೈಯಲ್ಲಿ ಕುಂಚಹಿಡಿದ ಕೂಡಲೇ ಮರೆಯುತ್ತಿದ್ದರು. ಕೆಲಸದಲ್ಲಿ ತಲ್ಲೀನರಾಗುತ್ತಿದ್ದರು.

**ಕಲಾಕೃತಿಗಳು**

ಕಾಳಪ್ಪನವರು ರಚಿಸಿದ ಚಿತ್ರಗಳಲ್ಲಿ ಪೌರಾಣಿಕ ಹಿನ್ನೆಲೆಯವು ಮತ್ತು ಭೂ ದೃಶ್ಯಗಳು ಅಧಿಕವಾಗಿದ್ದವು. ಅವರ ಒಂದೊಂದು ಕಲಾಕೃತಿಗಳು ಪರಿಪಕ್ವತೆಯ ನೋಟವನ್ನು ಒದಗಿಸುತ್ತಿದ್ದವು. ವೀಕ್ಷಕರನ್ನು ಹಿಡಿದಿಡುವ ಚೈತನ್ಯ ಪಡೆದಿದ್ದವು. ರೋಮ್ಯಾಂಟಿಕ್ ನೆಲೆ ಅಥವಾ ಅಕಾಡೆಮಿಕ್ ಶೈಲಿಯಲ್ಲೇ ಚಿತ್ರ ರಚಿಸುತ್ತಿದ್ದ ಇವರಿಗೆ ನವ್ಯಕಲೆಗಳ ಬಗ್ಗೆ ಅಷ್ಟಾಗಿ ಹಿಡಿಸುತ್ತಿರಲಿಲ್ಲ. ಅದಕ್ಕೆ ಕಾರಣವು ಇಲ್ಲದಿಲ್ಲ. ಅಂದು ಅವರು ಕಲಿತ ವಾತಾವರಣವೇ ಹಾಗೆ ಇತ್ತು. ಅರಮನೆಯ ಕಲಾವಿದರಾದ ಸಿದ್ಧಲಿಂಗ ಸ್ವಾಮಿಗಳು, ಕೇಶವಯ್ಯನವರು, ಕೆ. ವೆಂಕಟಪ್ಪನವರು, ವೈ. ಸುಬ್ರಮಣ್ಯರಾಜು ಇವರೆಲ್ಲರ ಆದರ್ಶ, ಬೋಧನಾ ಕ್ರಮವೇ ಆದಾಗಿತ್ತು. ಮುಂಬಯಿಯ ಜೆ.ಜೆ. ಸ್ಕೂಲ್‌ನಲ್ಲಿ ಅಭ್ಯಾಸಮಾಡಿ ಬಂದವರಾದ್ದರಿಂದ ಅವರೆಲ್ಲರಿಗೂ ಪಾಶ್ಚಾತ್ಯ ಕಲಾವಿದರಾದ ಜಾನ್ ಕಾನ್‌ಸ್ಟೇಬಲ್, ಜೋಸೆಫ್ ಟರ್ನರ್, ಬಾಟಿಶೆಲ್ಲಿ, ರೆಂಬ್ರಾಂಟ್ ಇವರು ರಚಿಸುತ್ತಿದ್ದ ತದ್ರೂಪ ಚಿತ್ರರಚನಾ ಶೈಲಿಯೇ ಮಾರ್ಗಸೂಚಿಯಾಗಿತ್ತು. ಬಂಗಾಳದ ಶಾಂತಿನಿಕೇತನದಿಂದ ಕಲಿತು ಬಂದವರಿಗೆ ಮಾತ್ರ ಬಂಗಾಳಿ ಶೈಲಿಯೆಂದೇ ಪ್ರಸಿದ್ಧವಾದ ಮಟ್ಟಸವಾದ ವರ್ಣಬಳಕೆಯುಳ್ಳ ಶೈಲಿ ರೂಢಿಯಾಗಿತ್ತು. ಜೆ.ಜೆ. ಸ್ಕೂಲಿನಿಂದ ಬಂದವರೇ ಕಾಳಪ್ಪನವರ ಗುರುಗಳು ಮತ್ತು ಆ ಸಂದರ್ಭದಲ್ಲಿ ಕಲಿತವರೆಲ್ಲರೂ ರೊಮ್ಯಾಂಟಿಕ್ ಶೈಲಿಯವರೇ ಆದ್ದರಿಂದ ಅವರನ್ನು ನವ್ಯಕ್ಕೆ ಹೊಂದಲಾರದವರೆಂದು ತೆಗಳುವುದು ಅರ್ಥಹೀನವೆನಿಸುತ್ತದೆ.

ಕಾಳಪ್ಪನವರು ಮಾಡಿದ ಭೂ ದೃಶ್ಯಗಳು ಅನೇಕ. ಮೈಸೂರಿನ ಸುತ್ತ ಮುತ್ತು ಇರುವ ಶ್ರೀರಂಗಪಟ್ಟಣ, ನಂಜನಗೂಡು, ಕೆ.ಆರ್.ಎಸ್. ಎಂದೇ ಪ್ರಸಿದ್ಧಿಯಾದ ಕೃಷ್ಣರಾಜಸಾಗರ ಹಾಗೂ ನಗರ ಪ್ರದೇಶದಲ್ಲಿರುವ ಅರಮನೆ ಮತ್ತು ನಾಲ್ಕು ದಿಕ್ಕುಗಳಲ್ಲಿರುವ ಮಹಾದ್ವಾರಗಳು, ಸುತ್ತಮುತ್ತ ಇರುವ ಹಸುವಿನ ಕರೋಟಿ, ಆನೆಕರೋಟಿ, ಪ್ರಾಣಿ ಸಂಗ್ರಹಾಲಯ, ಚಾಮುಂಡಿಬೆಟ್ಟದ ಪ್ರದೇಶಗಳು, ಬೆಟ್ಟದ ಬಸವಣ್ಣ, ಕಾರಂಜಿಕೆರೆ, ದೊಡ್ಡಕೆರೆ, ಕುಕ್ಕನಹಳ್ಳಿಕೆರೆ ಇವೆಲ್ಲವು ಕಲಾವಿದರಿಗೆ ಸ್ಫೂರ್ತಿನೀಡುವ ತಾಣಗಳು. ಸೈಕಲ್ ಸವಾರಿ ಮಾಡಿಕೊಂಡೇ ಹೋಗಿ ಬರುವಂತಹ ಸ್ಥಳವಾಗಿದ್ದು, ಅಭ್ಯಾಸಿಗಳಿಗೆ ಹೊಸ ಆಯಾಮ ನೀಡುವಂತಹವಾಗಿದ್ದವು. ಕಾಳಪ್ಪನವರು ರಘೋತ್ತಮಪುಟ್ಟಿ, ಸೀತಾರಾಂ, ಚಂದ್ರಶೇಖರ್, ಸೋಮಸುಂದರಂ ರವರೊಡಗೂಡಿ ಚಿತ್ರಿಸಲು ಹೋಗುತ್ತಿದ್ದರು. ಕಾಳಪ್ಪನವರ ರಚನಾ ಶೈಲಿಯ ವಿಶೇಷವೆಂದರೆ ಇತರರು ಒಂದು ಚಿತ್ರರಚಿಸುವ ಹೊತ್ತಿಗೆ ಇವರು ಎರಡು ಚಿತ್ರರಚಿಸುತ್ತಿದ್ದರು. ಕೆಲವು ವೇಳೆ ಏಕಾಂಗಿಯಾಗಿ ಹೋಗಿ ಹಲವಾರು ಸ್ಕೆಚ್ ಮಾಡಿಕೊಂಡು ಬಂದು ಇತರರಿಗೆ ಇಂತಿಂತಹ ಜಾಗ ಬರೆಯಲು ಸೂಕ್ತವಾಗಿದೆಯೆಂದು ಹುರಿದುಂಬಿಸಿ ಕರೆದೊಯ್ಯುತ್ತಿದ್ದರು. ಶೀಘ್ರಲಿಪಿಯಂತೆ ರಚಿಸಿಕೊಂಡ ಚಿತ್ರಗಳ ಸಮೂಹ (Sketch)ವನ್ನು ನೋಡಿದರೆ ಅವರ ಶ್ರಮದ ಹಿನ್ನೆಲೆಯ ಅರಿವು ಉಂಟಾಗುತ್ತದೆ. ಅಂತಹ ಶ್ರಮ ಇಂದಿನ

ಯುವ ಜನಾಂಗದಲ್ಲಿ ಕಾಣುವುದು ಕಷ್ಟ. ಭೂದೃಶ್ಯ ಕಲಾವಿದರಿಗೆ ಕೆಂಪುಹೂವಿನ ಮರ (May Flower) ಸ್ಫೂರ್ತಿಯ ಚಿಲುಮೆ ಇದ್ದಂತೆ. ಅದರ ವರ್ಣಗಳು ಪ್ರಲೋಭನೆಯನ್ನು ನೀಡುವಂತಹದ್ದು. ಏಪ್ರಿಲ್ ಮೇ ತಿಂಗಳಲ್ಲಿ ಕೆಂಪುಹೂಗಳು ಮರದ ತುಂಬಾ ಗೊಂಚಲು ಗೊಂಚಲಾಗಿ ಅರಳುತ್ತವೆ ಹಾಗೆಯೇ ನೆಲದಮೇಲೆ ಉದುರುತ್ತವೆ. ಈ ಸನ್ನಿವೇಶವನ್ನು ಕಾಳಪ್ಪನವರು ಹಲವಾರು ಚಿತ್ರಗಳ ಮೂಲಕ ಮೂಡಿಸಿದ್ದಾರೆ. ಅನ್ಯದೇಶಿಯರು ದಸರಾ ಸಂದರ್ಭದಲ್ಲಿ ಹೆಚ್ಚಿನ ರೀತಿಯಲ್ಲಿ ವೀಕ್ಷಣೆಗಾಗಿ ಬರುತ್ತಿದ್ದರು. ಅವರುಗಳು ಕೆಂಪುಹೂವಿನ ಮರದ ಹಿನ್ನೆಲೆಯಲ್ಲಿ ಅರಮನೆ ಮತ್ತು ಸುತ್ತಮುತ್ತಲಿನ ಉತ್ತಮ ವಾಸ್ತು ಕಟ್ಟಡಗಳುಳ್ಳ ಚಿತ್ರಗಳನ್ನು ಖರೀದಿಸುತ್ತಿದ್ದರು. ಹಾಗಾಗಿ ಕಾಳಪ್ಪನವರು ಇಂತಹ ನೂರಾರು ಚಿತ್ರ ರಚಿಸಿ ಮಾರಾಟ ಮಾಡಿದ್ದಾರೆ. ಅಂದಂದಿನ ಜೀವನೋಪಾಯಕ್ಕೆ ಇದಷ್ಟೇ ಸಹಕಾರಿಯಾಗಿದೆ ಎಂದು ಹೇಳುತ್ತಿದ್ದರು. ಇಂತಹ ಸನ್ನಿವೇಶವನ್ನೊಳಗೊಂಡ ಚಿತ್ರವೊಂದು ಜಗನ್‌ಮೋಹನ ಪ್ಯಾಲೇಸ್‌ನಲ್ಲಿದೆ.

## ಭಿನ್ನ ಶೈಲಿಯ ಕೃತಿಗಳು

ಕಾಳಪ್ಪನವರು ತಮ್ಮ ಸಹಜ ಕಲಾಶೈಲಿಗಿಂತ ಭಿನ್ನತೆಯಾಗಿ ಚಿತ್ರಿಸಬೇಕೆಂದು ಪ್ರಯತ್ನಿಸಿದುದು ಉಂಟು. ಅದರಲ್ಲಿ ಕನಸುಗಳ ಲೋಕದಲ್ಲಿ ಎಂಬ ತೈಲಚಿತ್ರವೂ ಒಂದು. ಇದು ಕಾಲ್ಪನಿಕವಾಗಿದ್ದರೂ ಚಿತ್ರಸಮೂಹವನ್ನು ನೋಡಿದಾಗ ಅವರ ಸಹಜ ಶೈಲಿಯ ಭೂದೃಶ್ಯಕ್ಕಿಂತ ಭಿನ್ನವಾಗಿಲ್ಲ. ಮರವೊಂದರ ಹೊರಮೈನಲ್ಲಿ ಕನಸು ಕಾಣುತ್ತಿರುವ ಮುಖವೊಂದನ್ನು ಚಿತ್ರಿಸಿದ್ದಾರೆ. ಅದನ್ನೊಂದನ್ನು ಹೊರತುಪಡಿಸಿದರೆ ಮರದ ಸ್ವರೂಪ ತದ್ರೂಪ ಚಿತ್ರಕ್ಕಿಂತ ಭಿನ್ನವಾಗಿಲ್ಲ. ಹಿನ್ನಲೆಯಲ್ಲಿ ಆಂಜನೇಯನ ಮೂರ್ತಿ, ಕೈಮುಗಿಯುತ್ತಿರುವ ಭಕ್ತಾದಿಗಳು, ಸನಿಹದಲ್ಲೇ ಇರುವ ತಟಾಕದಲ್ಲಿ ತಮ್ಮ ದಣಿವಾರಿಸಿಕೊಳ್ಳಲು ಜಲಸಿಂಚನ ಮಾಡುತ್ತಿರುವುದು, ಮರದ ಬುಡದಲ್ಲಿ ನಿಂತ ನೀರು ಪ್ರಶಾಂತತೆಯಿಂದಿದ್ದು ಪ್ರತಿಫಲನಕ್ಕೆ ಅವಕಾಶಮಾಡಿದೆ. ದೂರದಲ್ಲಿ ಯಥಾದೃಷ್ಟಿ ನಿಯಮಕ್ಕನುಗುಣವಾಗಿ (Perspective) ಭವ್ಯಬಂಗಲೆಯನ್ನು ಚಿತ್ರಿಸಿದ್ದಾರೆ. ಇಲ್ಲೆಲ್ಲಿಯೂ ಕಲಾವಿದರ ಅಂತರ್ಗತ ತುಡಿತವನ್ನು ಕಾಣಲಾಗದು. ಸಹಜ ಸುಂದರ ಭೂದೃಶ್ಯದ ಎಲ್ಲಾ ಆಯಾಮಗಳನ್ನು ಹೊಂದಿರುವಂತಹದಾಗಿದೆ.

'ಮಕ್ಕಳ ಮಾನಸೋಲ್ಲಾಸ' ಚಿತ್ರದಲ್ಲಿ ಈರ್ವರು ಮಕ್ಕಳು ಕಗ್ಗಲ್ಲೊಂದರ ಮೇಲೆ ಕುಳಿತು ಬಾಲಚೇಷ್ಟೆಗಳನ್ನು ಮಾಡುತ್ತಿರುವ ರೀತಿಯ ಚಿತ್ರವಾಗಿದ್ದು, ಹಿನ್ನಲೆಯಲ್ಲಿ ಹರಿದ್ವರ್ಣದ ವೃಕ್ಷ ಸಮುಚ್ಚಯವಿದೆ. ಅವರ ಮೊಮ್ಮಕ್ಕಳನ್ನೇ ಕೂರಿಸಿ ಬರೆದ ಚಿತ್ರದಂತೆ ತೋರುತ್ತದೆ. ಪಾಶ್ಚಾತ್ಯ ಚಿತ್ರಕಲಾವಿದ ಎಲ್‌ಗ್ರೇಕೋ, ಥಾಮ್ಸಾಗೇನ್ಸ್, ಬರೋ ಅವರುಗಳು ಬರೆದ ಚಿತ್ರಗಳ ಪ್ರಭಾವವಿದ್ದಂತೆ ಭಾಸವಾಗುತ್ತದೆ.

ಕಾಡಿನ ರಾಜಾ ಶೀರ್ಷಿಕೆಯ ಚಿತ್ರದಲ್ಲಿ ಸಹ ಸಿಂಹದ್ವಯಗಳು ಬಂಡೆಯೊಂದರ ಮೇಲೆ ನಿಂತು ಗರ್ಜಿಸುತ್ತಿರುವ ರೀತಿ, ಅದರ ಅಂಗಸೌಸ್ಥವ, ಭಯಾನಕ ವರ್ಚಸ್ಸು ಅದಕ್ಕನುಗುಣವಾಗಿ ಬಳಸಿದ ಹಳದಿ ಬಣ್ಣದ ವೈವಿಧ್ಯತೆ, ಹಿನ್ನೆಲೆಯಲ್ಲಿ ಕಾನನದ ಕತ್ತಲೆಯನ್ನು ಸೂಸುವಂತೆ ಬಳಸಿದ ಕಪ್ಪು ಮಿಶ್ರಿತ ನೀಲಛಾಯೆ ಚಿತ್ರದ ಒಟ್ಟಂದಕ್ಕೆ ಶೋಭೆತರುತ್ತವೆ. ಎಫ್.ಎಂ. ಸೂಫಿಯವರ ಪ್ರಾಣಿ ವೈವಿಧ್ಯ ಚಿತ್ರಮಾಲಿಕೆಯ ನೆನಪನ್ನು ತರುತ್ತವೆ.

## ಇತರ ಸಮಿತಿಗಳಲ್ಲಿ

ಕಾಳಪ್ಪನವರು ಕಲಾಪ್ರದರ್ಶನಕ್ಕೆ ಭಾಗವಹಿಸಿದುದು ಮಾತ್ರವಲ್ಲ. ಆಯ್ಕೆ ಸಮಿತಿಯಲ್ಲಿ, ಬಹುಮಾನ ನಿರ್ಣಯ ಸಮಿತಿಯಲ್ಲಿದ್ದು ನಿಷ್ಪಕ್ಷಪಾತ ನಿರ್ಣಯಕ್ಕೆ ಹೆಸರಾಗಿದ್ದರು. ಕರ್ನಾಟಕ ಪ್ರವಾಸೋದ್ಯಮ ಇಲಾಖೆ ಕರ್ನಾಟಕದ ಹಿರಿಮೆಯನ್ನು, ಕಲಾ ಸೌಂದರ್ಯವನ್ನು ಪ್ರಚುರಪಡಿಸುವುದರ ಅಂಗವಾಗಿ ಪ್ರವಾಸ ಸಪ್ತಾಹ ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಆ ಸಂದರ್ಭದಲ್ಲಿ ಬೆಂಗಳೂರು ವೆಂಕಟಪ್ಪ ಚಿತ್ರಶಾಲೆಯಲ್ಲಿ ನಡೆದ ಸಪ್ತಾಹಕ್ಕೆ ಕಾಳಪ್ಪನವರ ಚಿತ್ರಗಳು ಆಯ್ಕೆಗೊಂಡಿದ್ದವು.

ಕಾಳಪ್ಪನವರು ಸಾಧನೆ ಬೋಧನೆ ಜೊತೆಗೆ ಸಾರ್ವಜನಿಕ ಕಲಾಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗುತ್ತಿದ್ದರು. ಕರ್ನಾಟಕ ಲಲಿತಕಲಾ ಅಕಾಡಮಿಯ ಸದಸ್ಯರಾಗಿ (೧೯೬೯-೭೫) ಆರು ವರ್ಷದ ಸೇವೆಸಲ್ಲಿಸಿದ್ದಾರೆ. ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಮತ್ತು ಕರಕುಶಲಕಲೆ ಅಭಿವೃದ್ಧಿ ಇಲಾಖೆಯ ವಿದ್ಯಾಮಂಡಲಿ ಸದಸ್ಯರಾಗಿ, ಬಾಲಕ ಬಾಲಕಿಯರಿಗೆ ಪ್ರಾಥಮಿಕ ಹಂತದಲ್ಲೇ ಕರಕುಶಲಕಲೆಗಳ ಉಪಯುಕ್ತತೆ ಕುರಿತಂತೆ ಸಲಹೆಗಾರರಾಗಿ ಸೇವೆಸಲ್ಲಿಸಿದ್ದಾರೆ.

ಮೈಸೂರು ದಸರಾ ವಸ್ತು ಪ್ರದರ್ಶನ ಸಮಿತಿಯ ಸದಸ್ಯರಾಗಿ (೧೯೮೫-೯೧) ಕಲಾಪ್ರದರ್ಶನದ ಗುಣಮಟ್ಟವನ್ನು ಕಾಯ್ದುಕೊಳ್ಳುವುದರೊಂದಿಗೆ ಸುವ್ಯವಸ್ಥಿತಗೊಳಿಸುವ ಸಲುವಾಗಿ ಶ್ರಮಿಸಿದ್ದಾರೆ. ಹಾಗೆಯೇ ಆಯ್ಕೆ ಸಮಿತಿಯ ಸದಸ್ಯರಾಗಿ ಸಹ ಸೇವೆ ಸಲ್ಲಿಸಿದ್ದಾರೆ. ಎಲ್ಲಾದರೂ ಅನ್ಯಾಯ ಕಂಡುಬಂದರೆ ಸಿಡಿದೇಳುವ ಪ್ರವೃತ್ತಿ ಇದ್ದು, ಸಭೆಯಿಂದ ಹೊರಬಂದದ್ದೂ ಉಂಟು. ಅಧಿಕಾರಕ್ಕಾಗಿ ಅಂಟಿಕೊಂಡೇ ಇರಬೇಕೆಂಬ ಹಂಬಲ ಅವರದಾಗಿರಲಿಲ್ಲ. ಇರುವಷ್ಟು ದಿನ ನ್ಯಾಯಯುತವಾಗಿ ಸೇವೆಸಲ್ಲಿಸಬೇಕೆಂಬ ಮನೋಭಾವ ಅವರದು. ಇವರಿಗಿಂತ ಕಿರಿಯರಿಗೆ ರಾಜ್ಯ ಲಲಿತಕಲಾ ಅಕಾಡಮಿ ಪ್ರಶಸ್ತಿ ಬಂದಾಗಲೂ ತೀವ್ರ ಪ್ರತಿಭಟನೆ ಮಾಡಿದುದು ಉಂಟು. ಅವರ ಮಾತುಗಳು ಬಿರುಸು, ಮೇಲ್ನೋಟಕ್ಕೆ ಕಠಿಣ ಎನಿಸಿದರೂ ಅವು ತಾತ್ವಿಕ ನೆಲೆಗಟ್ಟುಗಳಾಗಿರುತ್ತಿದ್ದವು. ವಾಸ್ತವಿಕ ಸತ್ಯವನ್ನು ಬಿಂಬಿಸುತ್ತಿದ್ದವು. ಕಲಾಶಾಲೆ ಆರಂಭಿಸಲು ಉತ್ತೇಜಿಸಿದ ಜಿ.ಡಿ. ಅಯ್ಯಂಗಾರ್ಯರು ನಡೆಸುತ್ತಿದ್ದ ವಾಣಿ ವಿದ್ಯಾಮಂದಿರದ ಅಧ್ಯಕ್ಷರಾಗಿ ಸಹ ಸೇವೆ ಸಲ್ಲಿಸಿದ್ದರು.

## ಕಾಳಪ್ಪನವರ ಕೊನೆಯ ಶಿಬಿರ

ಅಂಚೆ ಮೂಲಕ ಚಿತ್ರಕಲೆಯನ್ನು ಕಲಿಸುವ ರಾಜ್ಯದ ಏಕೈಕ ಸಂಸ್ಥೆಯಾದ ಆಚಾರ್ಯ ಚಿತ್ರಕಲಾಭವನವು ೩೦ನೇ ವಾರ್ಷಿಕೋತ್ಸವದ ಸವಿನೆನಪಿಗಾಗಿ ಹಿರಿಯ ಕಲಾವಿದರ ಶಿಬಿರವನ್ನು ಮೈಸೂರಿನ ವಿವೇಕಾನಂದ ವೃತ್ತದ ಬಳಿ ಇರುವ ಭರಣಿ ಗ್ಯಾಲರಿಯಲ್ಲಿ ೨.೪.೨೦೦೦ ದಿಂದ ೪.೪.೨೦೦೦ರವರೆಗೆ ಏರ್ಪಡಿಸಿತ್ತು. ಆ ಸಂದರ್ಭದಲ್ಲಿ ಮೈಸೂರಿನ ಪ್ರತಿಷ್ಠಿತ ಕಲಾವಿದರಾದ ಎಂ.ಜೆ. ಶುದ್ಧೋದನ, ಆರ್. ಸೀತಾರಾಂ, ರಘೋತ್ತಮಪುಟ್ಟಿ, ವಿಷ್ಣುದಾಸ್ ರಾಮದಾಸ್, ಪಿ.ಆರ್. ತಿಪ್ಪೇಸ್ವಾಮಿ, ಶಿಲ್ಪಿ ಸಿದ್ದಲಿಂಗಯ್ಯ, ಎಂ.ಈ. ಗುರು, ರಾಮನರಸಯ್ಯ, ಸೋಲಾಪುರಕರ ಮತ್ತು ಕಾಳಪ್ಪನವರು ಭಾಗವಹಿಸಿದ್ದರು. ಇಡೀ ಶಿಬಿರದಲ್ಲಿ ಅತ್ಯುತ್ಸಾಹದಿಂದ ಲವಲವಿಕೆಯಾಗಿ ಓಡಾಡುತ್ತಿದ್ದವರು, ಜನರಲ್ಲಿ

ಸ್ಪಂದಿಸುತ್ತಿದ್ದವರು ಕಾಳಪ್ಪನವರು. ಆ ಶಿಬಿರದಲ್ಲಿ ಭರಣಿ ಗ್ಯಾಲರಿ ಮಾಲೀಕ ಎನ್.ಬಿ. ಕಾವೇರಪ್ಪನವರ ಪುತ್ರಿಯನ್ನು ಕೂರಿಸಿ ಜಲವರ್ಣದ ಭಾವಚಿತ್ರ ರಚಿಸಿದರು. ಅನೇಕ ಕಲಾಶಾಲೆಗಳಿಂದ ಬಂದ ತರುಣ ಕಲಾವಿದರಿಗೆ ಅಚ್ಚರಿ ಮೂಡಿಸಿತ್ತು. ಈ ವಯಸ್ಸಿನಲ್ಲಿಯೂ ಅವರ ಕೈಹಿಡಿತ ಕಂಡು ವಿಸ್ಮಯಗೊಂಡರು.

ಕಲಾಶಿಬಿರದ ಸಂದರ್ಭದಲ್ಲಿ ಇಂದಿನ ಕಲಾಶಿಕ್ಷಣ ಕುರಿತಂತೆ ಮಾತನಾಡುತ್ತಾ ಇಂದು ಕಲಾಶಿಕ್ಷಣಕ್ಕೆ ಯಾವ ರೀತಿ ಪ್ರೋತ್ಸಾಹವಿಲ್ಲದಂತಾಗಿದೆ, ಎಸ್.ಎಸ್.ಎಲ್.ಸಿ. ನಂತರದಲ್ಲಿ ಡಿ.ಎಂ.ಸಿ. ೨ ವರ್ಷ, ಡಿಪ್ಲೊಮಾ ೩ ವರ್ಷ, ಎ.ಎಂ. ೧ ವರ್ಷ ಹೀಗೆ ೬ ವರ್ಷ ಶಿಕ್ಷಣ ಪೂರೈಸಿದ ಕಲಾವಿದನ ಪರಿಸ್ಥಿತಿಯಾದರೂ ಏನು? ಸುಮಾರು ಹತ್ತುಹನ್ನೆರಡು ವರ್ಷದಿಂದ ಪ್ರಾಥಮಿಕ, ಮಾಧ್ಯಮಿಕ, ಹೈಸ್ಕೂಲ್‌ಗಳಿಗೆ ಯಾವ ಕಲಾ ಶಿಕ್ಷಕನನ್ನು ತೆಗೆದುಕೊಂಡಿಲ್ಲ. ನೂರಾರು ಕಲಾಶಾಲೆಗಳಿಗೆ ಅನುಮತಿ ನೀಡಿದ್ದಾರೆ. ಅನುದಾನವಿಲ್ಲ, ನಿರ್ದಿಷ್ಟವಾದ ಪಠ್ಯಪುಸ್ತಕವಿಲ್ಲ. ಸರ್ಕಾರ, ಸಂಬಂಧಿಸಿದ ಇಲಾಖೆ ಕೆಲವೇ ಜನರ ಕೈಗೊಂಬೆಯಾಗಿ ಅವರು ಹೇಳಿದಂತೆ ಕೇಳುವ ಪರಿಸ್ಥಿತಿ ನಿರ್ಮಾಣವಾಗಿದೆ. ಅನುಕೂಲ ಪಡೆಯುವವರೇ ಮತ್ತಷ್ಟು ಅನುಕೂಲ ಪಡೆಯುತ್ತಾರೆ. ಕೇವಲ ೨೦-೨೫ ಕಲಾಶಾಲೆಗಳಿಗೆ ಮಾತ್ರ ಅನುದಾನವಿದೆ. ಉಳಿದ ನೂರರಷ್ಟು ಕಲಾಶಾಲೆಗಳು ಅಪಾಯದ ಅಂಚಿನಲ್ಲಿದೆ. ಕಲಿತ ವಿದ್ಯಾರ್ಥಿಗಳಿಗೆ ಉದ್ಯೋಗವೂ ಇಲ್ಲ. ನಡೆಸುವ ಕಲಾಶಾಲೆಗೆ ಅನುದಾನವೂ ಇಲ್ಲ. ಅಂದ ಮೇಲೆ ವಿದ್ಯಾರ್ಥಿಗಳಿಲ್ಲದ ಶಾಲೆ ನಡೆಸುವುದಾದರೂ ಹೇಗೆ ಎಂದು ತಮ್ಮ ಕಾಲಾವಧಿಯಲ್ಲಿ ಕಲಾಶಾಲೆ ತೆರೆದು ಅನುಭವಿಸಿದ ಯಾತನೆಯ ಮೆಲುಕು ಹಾಕಿದರು. ವಾಣಿಜ್ಯ ಕಲಾತರಗತಿ ಮಾಡಲು ಅನುಮತಿ ಕೊಡಬೇಕು, ಕಲಿತು ಬಂದವನು ತನ್ನ ಕಾಲಮೇಲೆ ತಾನು ನಿಲ್ಲುವಂತಾಗಬೇಕು. ಇಂದಿನ ಗಣಕಯಂತ್ರದ ಯುಗಕ್ಕೆ ಹೊಂದಿಕೆಯಾಗುವಂತೆ ಕಲಾಶಾಲೆ ಮಾರ್ಪಡಿಸಲು ಸರ್ಕಾರ, ಅಕಾಡಮಿಗಳು ನೆರವು ನೀಡಬೇಕು. ಕಲಾಶಿಕ್ಷಣವೆಂಬುದು ತಾಯಿ ಇಲ್ಲದ ಮಗುವಿನಂತಾಗಿದೆ ಎಂದು ಖೇದ ವ್ಯಕ್ತಪಡಿಸುತ್ತಿದ್ದರು.

ತಮ್ಮ ಮನೆಯಲ್ಲಿಯೇ ನಡೆಸುತ್ತಿದ್ದ ಹವ್ಯಾಸಿ ಕಲಾ ವಿದ್ಯಾರ್ಥಿಗಳ ಪ್ರದರ್ಶನವನ್ನು ಆಗಾಗ್ಗೆ ಮಾಡಿ ಸ್ಫೂರ್ತಿ ನೀಡುತ್ತಿದ್ದರು. ಇದುವರೆಗೆ ಹವ್ಯಾಸಿಗಳಾಗಿ ಕಲಿತ ಎಲ್ಲಾ ಶಿಷ್ಯರ ಕಲಾಪ್ರದರ್ಶನ ಮಾಡಬೇಕೆಂದು ತಯಾರಿ ನಡೆಸುತ್ತಿದ್ದುದನ್ನು ಆಚಾರ್ಯ ಚಿತ್ರಕಲಾ ಭವನದ ಹಿರಿಯರ ಕಲಾಶಿಬಿರಕ್ಕೆ ಆಹ್ವಾನಿಸಲು ಹೋದಾಗ ನೆನಪಿನ ಫಲಕ, ಅರ್ಹತಾ ಪತ್ರಗಳು, ಭಾಗವಹಿಸುವ ವಿದ್ಯಾರ್ಥಿಗಳ ಫೋಟೋ ಸಹಿತ ವಿವರ, ಸ್ಮರಣ ಸಂಚಿಕೆ ತರಲು ಬೇಕಾದ ಲಭ್ಯ ಮಾಹಿತಿಗಳು ಹೀಗೆ ಹಲವು ವಿಧದಲ್ಲಿ ಕ್ರೋಢೀಕರಣ ನೆಡೆಸಿದ್ದನ್ನು ತೋರಿಸಿದರು. ತಮ್ಮ ಕಲಾಶಾಲೆ ಬೆಳೆದುಬಂದ ರೀತಿಯ ಸಮಗ್ರ ವಿವರಣೆಯನ್ನು ದಾಖಲಿಸುವ ಹಂಬಲ ಅವರದಾಗಿತ್ತು. ಜೊತೆಗೆ ತಮ್ಮದೇ ಆದ ಗ್ಯಾಲರಿ ಮಾಡಬೇಕೆಂಬ ಹಿರಿಯಾಸೆ ಇಟ್ಟುಕೊಂಡಿದ್ದರು. ನಿಮ್ಮ ಆಸೆಯೇನೋ ಆಕಾಶದಷ್ಟಿದೆ ಹಣವನ್ನೆಲ್ಲಿ ತರುತ್ತೀರಿ ಎಂದು ಸ್ನೇಹಿತರು ಗೇಲಿ ಮಾಡುತ್ತಿದ್ದುದು ಉಂಟು. ನನಗೆ ಯಾವುದಾದರೂ ಕಲಾಕೃತಿ ರಚಿಸುವ ಕೆಲಸಕೊಡಿ ಸಾಕು. ನಾನು ಅದರಿಂದ ಬಂದ ಹಣದಿಂದ ನನ್ನ ವಿದ್ಯಾರ್ಥಿ ಪ್ರದರ್ಶನ ಮಾಡುತ್ತೇನೆ ಅನ್ನುತ್ತಿದ್ದರು. ಆದರೆ ವಿಧಿ ಅವರನ್ನು ಬಿಡಲಿಲ್ಲ. ಯಾವುದೇ ಖಾಯಿಲೆ ಇಲ್ಲದೆ ನಗುನಗುತ್ತಾ ಚೈತನ್ಯ ಪೂರ್ವಕವಾಗಿ ಓಡಾಡಿಕೊಂಡು ಇದ್ದ ಅವರು ೩.೫.೨೦೦೦ರಂದು ಕಾಲವಾದರು ಎಂದರೆ ಯಾರೂ ನಂಬಲಿಲ್ಲ.

ಕಾಳಪ್ಪನವರ ಆಸೆಯನ್ನು ಪೂರೈಸಲು ಅವರ ಪತ್ನಿ ಸುಬ್ಬಮ್ಮನವರು ಮತ್ತು ಅವರ ಪುತ್ರಿ ಕಮಲ ಪುತ್ರ ನಾಗೇಶರವರು ಉತ್ಸುಕರಾಗಿದ್ದಾರೆ. ಇದೊಂದು ಆಶಾದಾಯಕ ಸಂಗತಿ. ಶ್ರೀಮತಿ ಕಮಲ ಅವರು ಆರ್ಟ್ ಮಾಸ್ಟರ್, ನಾಗೇಶರವರು. ಡಿ.ಎಂ.ಸಿ. ಮಾಡಿರುವುದರಿಂದ ಗ್ಯಾಲರಿ ಬಗ್ಗೆ ಆಸಕ್ತಿವಹಿಸಿರುವುದು ಸಹಜ ಎನಿಸಿದರೂ ಆರ್ಥಿಕ ಸಂಪನ್ಮೂಲ ಕ್ರೋಢೀಕರಣದ ಬಗ್ಗೆ ಚಿಂತಿಸುತ್ತಿದ್ದಾರೆ. ಅಕಾಡಮಿ, ಸಂಸ್ಕೃತಿ ಇಲಾಖೆ ಕೆಲವು ಕಲಾಕೃತಿಗಳನ್ನು ಕೊಳ್ಳುವ ಮೂಲಕ ಸಹಾಯವಾದಿತೆಂಬ ಆಸೆ ಅವರದು. ಜೊತೆಗೆ ಅವರ ಅಭಿಮಾನಿಗಳನ್ನು ಸಂಪರ್ಕಿಸುತ್ತಿದ್ದಾರೆ.

ಕಲಾಸಂಗ್ರಹ

ಕಾಳಪ್ಪನವರ ಕಲಾಕೃತಿಗಳು ಅಲ್ಲಲ್ಲಿ ಹರಿದು ಹಂಚಿಹೋಗಿವೆ. ಕೆಲವು ಪ್ರಮುಖ ಸ್ಥಳಗಳಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ರಾಜ್ಯ ಲಲಿತಕಲಾ ಅಕಾಡಮಿ, ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ಸಂಗ್ರಹಾಲಯ, ಜಗನ್ ಮೋಹನ ಪ್ಯಾಲೆಸ್, ವೆಂಕಟಪ್ಪ ಗ್ಯಾಲರಿ, ಭರಣಿಗ್ಯಾಲರಿ ಅಲ್ಲದೆ ವಿದೇಶಗಳಾದ ಪ್ಯಾರಿಸ್, ಯು.ಎಸ್.ಎ., ನೈಜೀರಿಯಾ ಮುಂತಾದ ಕಡೆ ಸೇರಿವೆ. ಪ್ರಮುಖವಾಗಿ ಕಲಾಭಿಲಾಷಿಗಳ ಮನೆಯಂಗಳದಲ್ಲಿ ದೇವತಾಮೂರ್ತಿ ಚಿತ್ರಗಳು, ಮುಖಚಿತ್ರಗಳು ಶೇಖರಗೊಂಡಿವೆ.

ಕಾಳಪ್ಪನವರಿಗೆ ಗೌರವಿಸಿದ ಸಂಸ್ಥೆಗಳು ಅನೇಕ. ಮುಖ್ಯವಾಗಿ ಅಖಿಲ ಭಾರತ ಕರಕುಶಲ ಮಂಡಲಿ ನವದೆಹಲಿ (೧೯೮೫), ರಾಜ್ಯ ಲಲಿತ ಕಲಾ ಅಕಾಡಮಿ (೧೯೮೭), ಮೈಸೂರು ಜಿಲ್ಲೆಯ ಚಿತ್ರಕಲಾ ಶಿಕ್ಷಕರ ಸಂಘ, ಲಯನ್ಸ್ ಕ್ಲಬ್, ವಾಣಿ ವಿದ್ಯಾಮಂದಿರ ಇತ್ಯಾದಿ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಕಾಳಪ್ಪನವರು ತಮ್ಮ ಕಲಾಸಂಸ್ಥೆಯ ಮೂಲಕ ಗೌರವಿಸಿದವರ ಸಂಖ್ಯೆಯೇ ಅಪಾರ. ಬಹುತೇಕ ಅವರ ಸಮಕಾಲೀನ ಕಲಾವಿದರೆಲ್ಲರನ್ನು ಗುರ್ತಿಸಿ ಗೌರವಿಸಿದ್ದಾರೆ. ವಿದ್ಯಾರ್ಥಿಗಳನ್ನು ಕಂಡರಂತೂ ಅಪಾರ ಅಚ್ಚುಮೆಚ್ಚು. ಅವರ ನಿಸ್ವಾರ್ಥ ಕಲಾಸೇವೆಗೆ ಸಿಗಬೇಕಾದ ಸ್ಥಾನಮಾನ ದೊರಕಲಿಲ್ಲವೆಂಬ ಕೊರಗು ಅವರಲ್ಲಿ ಮನೆಮಾಡಿತ್ತು. ಇನ್ನೂರ ಐವತ್ತು ರೂ.ಗಳ ಮಾಶಾಸನದಲ್ಲೇ ತೃಪ್ತಿ ಪಡಬೇಕಾಯಿತೆಂಬುದು ಅವರ ಮನಸ್ಸಿನ ಅಳಲಾಗಿತ್ತು.

ಒಟ್ಟಿನಲ್ಲಿ ಕಾಳಪ್ಪನವರು ೭೬ ವರ್ಷ ತುಂಬು ಜೀವನ ನಡೆಸಿ, ಮೈಸೂರಿನಲ್ಲಿದ್ದರೂ ರಾಜಾಶ್ರಯ ಬೇಡದೆ, ಚಿತ್ರಕಲೆಯ ಹಲವಾರು ಮಗ್ಗುಲುಗಳಲ್ಲಿ ಪರಿಶ್ರಮಿಸಿ, ಸಿನಿಮಾ ವಾಣಿಜ್ಯಕಲೆಯಿಂದ - ಕಲಾಶಾಲೆಯವರೆಗೆ ಅಪಾರ ಅನುಭವಗಳಿಸಿ ರಾಜ್ಯದ ಒಂದು ಕಾಲಘಟ್ಟದ ಕಲಾಚರಿತ್ರೆಗೆ ತಮ್ಮ ಕಾಣಿಕೆ ನೀಡಿದ್ದಾರೆಂದರೆ ತಪ್ಪಿಲ್ಲ.

## ಕೆಲವು ಕಲಾಕೃತಿಗಳ ವಿವರ

## Analysis of some of the works

### ವಿಶ್ವಾಮಿತ್ರ ಮೇನಕೆ

ನವರಸಗಳಲ್ಲಿ ಒಂದಾದ ಶೃಂಗಾರ ರಸವಿಲ್ಲದೇ ಯಾವ ಕಾವ್ಯವೂ ಪೂರ್ಣವೆನಿಸುವುದಿಲ್ಲ. ಕವಿಯಾದವನು, ಸಾಹಿತಿಯಾದವನು ತನ್ನ ಬರವಣಿಗೆಯಲ್ಲಿ ಒಂದಲ್ಲಾ ಒಂದು ರೀತಿಯಿಂದ ಶೃಂಗಾರ ರಸಕ್ಕೆ ಪ್ರಾಧಾನ್ಯಕೊಟ್ಟಿರುವ ಹಾಗೆ ಕಲಾವಿದನೂ ಸಹ ತನ್ನ ಕಲಾಕೃತಿಗಳಲ್ಲಿ ವ್ಯಕ್ತಪಡಿಸಿರುತ್ತಾನೆ. ವಿಶ್ವಾಮಿತ್ರ ಮೇನಕೆ ಸನ್ನಿವೇಶವು ಶೃಂಗಾರ ಕಾವ್ಯಕ್ಕೆ ಸ್ಫೂರ್ತಿ. ಈ ಸನ್ನಿವೇಶವನ್ನು ಪ್ರಧಾನವಾಗಿಟ್ಟುಕೊಂಡು ರಾಜಾ ರವಿವರ್ಮ, ಎಸ್.ಎಮ್. ಪಂಡಿತ, ಎಂ.ಟಿ.ವಿ. ಆಚಾರ್ಯ ಮತ್ತು ಕಾಳಪ್ಪನವರು ಚಿತ್ರಿಸಿದ್ದಾರೆ. ರಾಜಾ ರವಿವರ್ಮ ಚಿತ್ರದಲ್ಲಿ ವಿಶ್ವಾಮಿತ್ರ ಕಾಡಿನ ದಾರಿಯಲ್ಲಿ ಕುಳಿತಿದ್ದು ಪಕ್ಕದಲ್ಲಿಯೇ ಸತಿಯೋರ್ವಳು ಕುಳಿತಂತೆ ಮೇನಕೆ ಕುಳಿತಿದ್ದಾಳೆ. ಅವಳ ಕಣ್ಣುಗಳು ವಸ್ತ್ರರಹಿತವಾಗಿರುವ ಕಟ್ಟುಮಸ್ತಾದ ದೇಹವನ್ನೊಂದಿರುವ ವಿಶ್ವಾಮಿತ್ರನನ್ನೇ ಎವೆಯಿಕ್ಕದೇ ನೋಡುವಂತಿದೆ. ಚುಕ್ಕಿ ಚುಕ್ಕಿ ಇರುವ ಚೀಟಿ ಸೀರೆಯನ್ನುಟ್ಟು ಸಾಧಾರಣ ಹೆಂಗಸಿನಂತೆ ಕುಳಿತಿರುವ ಮೇನಕೆ ವೀಕ್ಷಕನಿಗೆ ಆಕರ್ಷಣೆ ಎನಿಸುವುದಿಲ್ಲ. ಕಾಳಪ್ಪನವರು ಬರೆದಿರುವ ಚಿತ್ರದಲ್ಲಿ ಮೇನಕೆ ಆತ್ಮಾಕರ್ಷಕ ಕೇಂದ್ರಬಿಂದುವಾಗಿದ್ದಾಳೆ. ನಯನ ಮನೋಹರ ನೃತ್ಯ ಮಾಡುವಂತಿದ್ದು, ಅವಳು ಧರಿಸಿದ ಉಡುಪುಗಳು ಪಾರದರ್ಶಕವಾಗಿದ್ದು ಒಳ ಅಂಗಾಂಗಳ ಆಕಾರಗಳನ್ನು ನೋಡಿ ಎಂಥವರೂ ಚಾಂಚಲ್ಯಕ್ಕೊಳಗಾಗಬೇಕೆಂಬುವ ಹಾಗೆ ಚಿತ್ರಿಸಿದ್ದಾರೆ. ಈ ರೀತಿಯ ಚಿತ್ರಣದ ಉದ್ದೇಶವೇ ತಪಸ್ಸಿನಲ್ಲಿರುವ ವಿಶ್ವಾಮಿತ್ರನನ್ನು ತನ್ನೆಡೆಗೆ ಸೆಳೆಯುವುದು. ಇವರು ರಚಿಸಿರುವ ಈ ತೈಲ ಚಿತ್ರದಲ್ಲಿ ವಿಶ್ವಾಮಿತ್ರ ಆಲದ ಮರದ ಬುಡದಲ್ಲಿ ಹುಲಿಚರ್ಮದ ಮೇಲೆ ಕುಳಿತು ಕಣ್ಮುಚ್ಚಿ ತಪೋ ಮಗ್ನನಾಗಿರುತ್ತಾನೆ. ಹಿನ್ನೆಲೆಯಲ್ಲಿ ಕಾಡಿನ ವಾತಾವರಣವಿದೆ. ವಿಶ್ವಾಮಿತ್ರ ಬಲಗೈಯನ್ನು ಕಮಂಡಲದಲ್ಲಿಟ್ಟುಕೊಂಡು ಹಸ್ತದಲ್ಲಿ ಜಪಮಣಿ ಎಣಿಸುತ್ತಿದ್ದಾನೆ. ಎಡಗೈಯನ್ನು ಎಡತೊಡೆಯ ಮೇಲಿಟ್ಟುಕೊಂಡಿದ್ದಾನೆ. ಅವಳ ಹೆಜ್ಜೆ ಗೆಜ್ಜೆ ಕುಣಿತಕ್ಕೆ ಕಣ್ತೆರೆದೊಡನೆ ಮನಸ್ಸು ವಿಕಲ್ಪಗೊಳ್ಳಬೇಕೆಂಬುದೇ ಕಥಾ ಆಶಯ. ಅದಕ್ಕನುಗುಣವಾಗಿ ಕಾಳಪ್ಪನವರು ಚಿತ್ರಿಸಿದ್ದಾರೆ.

### Vishvamitra Menaka

Sringara is one of the navarasas. Shringara means, Romance, erotic. Sringara has its place both in literature and art. Sanskrit literature has sringara as one of its important elements. Kalidasa's Shakuntala is an epic and it opens with the story of the sage Vishvamitra being enticed by the Heavenly Nymph Menaka, who succeeds in her mission of breaking the penance of Vishvamitra. He mates with her and the child Shakuntala is born.



The scene of Menaka seducing the sage has been painted by several modern artists in realistic style amongst these the more important ones are done by Ravi Varma, S.N.Pandit, M.T.V.Acharya. In Ravi Varma's Painting, well built muscular Vishvamitra wearing only loin cloth is sitting in a meditative posture and Menaka almost like an ordinary woman wearing an ordinary sari, sitting opposite him, is stareing at him. This picture does not attract a viewer as it does not truly depict Menaka's object of seduction. But Kalappa has painted this theme bringing out the best of Menaka's motive for which Vishvamitra falls a prey. Here Menaka is portrayed as a real seductress wearing transparent cloths revealing her bodily charm which could entice any man. With this attire she is shown dancing. Here lies Kalappa's originality being true to the epic of Kalidasa. This is a charming picture with excellent anatomical details.



## ಸಖಿಯರೊಡನೆ ಶಕುಂತಲೆ / Shakuntala with abigails

ಕಣ್ವಋಷಿಗಳ ಸಾಕುಪುತ್ರಿ ಶಕುಂತಲೆಯನ್ನು ದುಶ್ಯಂತನಿಗೆ ಕೊಟ್ಟು ವಿವಾಹ ಮಾಡಿದಮೇಲೆ, ಆಶ್ರಮ ಬಿಟ್ಟು ಹೊರಡುವ ಶಕುಂತಲೆಯು ತನ್ನ ಈರ್ವರೂ ಗೆಳತಿಯರು ಪರಿತಪಿಸುತ್ತಿರುವುದನ್ನು ಕಂಡು ಸಾಂತ್ವನ ಹೇಳುತ್ತಿರುವಂತಹ ದೃಶ್ಯ. ಅತ್ಯಂತ ವಿಷಾದದಿಂದ ಕತ್ತೆತ್ತಿನೋಡುತ್ತಿರುವ ಜಿಂಕೆಯ ಮರಿ. ಹಿನ್ನೆಲೆಯಲ್ಲಿ ಪರ್ಣಕುಟೀರ, ಹರಿಯುವ ನೀರು, ಕಾನನದ ವಾತಾವರಣವನ್ನುಂಟು ಮಾಡುವ ಮರಗಳು. ಅಲ್ಲಲ್ಲಿ ಹೂವಿನ ಚಿಕ್ಕಚಿಕ್ಕ ಗಿಡಗಳು. ಇಲ್ಲಿನ ವರ್ಣವೈವಿಧ್ಯವೆಂದರೆ ಶಕುಂತಲೆ ಶ್ವೇತವಸ್ತ್ರವನ್ನುಟ್ಟಿದ್ದಾಳೆ. ಶ್ವೇತವರ್ಣಕ್ಕೆ ಸಂಸ್ಕೃತ ಸಾಹಿತ್ಯದಲ್ಲಿ ಅಪಾರ ಮನ್ನಣೆ. ಶುಭ್ರವಾದ ಮನಸ್ಸು, ಕಳಂಕರಹಿತವಾದದ್ದು ಎಂಬ ಸಂಕೇತಕ್ಕೆ ಬಳಸುತ್ತಾರೆ. ಈ ದೃಷ್ಟಿಯಿಂದ ಶಕುಂತಲೆ ಗುಣಧರ್ಮವನ್ನು ಬಿಂಬಿಸಲಿಕ್ಕಾಗಿಯೇ ಕಾಳಪ್ಪನವರು ಶ್ವೇತವರ್ಣ ಬಳಸಿದ್ದಾರೆ. ಇದು ಅವರಿಗಿದ್ದ ಸಾಹಿತ್ಯ ಪ್ರಜ್ಞೆಗೆ ಸಾಕ್ಷಿಯಾಗಿದೆ. ಈ ತೈಲ ಚಿತ್ರ ಎತ್ತರಕ್ಕಿಂತ ಅಗಲ ಜಾಸ್ತಿ ಇದ್ದು ವೈವಿಧ್ಯತೆಯ ಮರಗಳ ಸಾಲು ಸಾಲನ್ನೇ ಕಾಣಬಹುದಾಗಿದೆ.

Shakuntala the foster daughter of Sage Kanva was married to Dushyanta. After this marriage while leaving Kanva's hermitage (ashram) her abigails cannot withstand the separation. They were in a gloomy mood. So also her pet deer is looking at Shakuntala with askance in a dejected mood. Shakuntala is pacifying all her companions. Shakuntala is wearing white dress that has lot of significance in Sanskrit literature. White colour symbolises purity of thought and actions. In the background the hermitage, running water, widely spread trees with canopies, and some small flowering shrubs in the foreground are painted with utmost delicacy. True depiction of this scene shows Kalappa's knowledge of literature. This picture has more width than length. The colour scheme is balanced and the overall effect is beautiful.

## ಶ್ರೀ ಕೃಷ್ಣಗಾರುಡಿ / Miracles of Krishna



ವಿಶ್ವ ಕನ್ನಡ ಸಮ್ಮೇಳನ ಮೈಸೂರಿನಲ್ಲಿ ನಡೆದಾಗ ಆ ಕಲಾಶಿಬಿರದಲ್ಲಿ ಚಿತ್ರಿಸಿದುದಾಗಿದ್ದು, ಅದು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವಶದಲ್ಲಿದೆ. ಇದರಲ್ಲಿ ಸಹ ಮೊಸಳೆಯೊಂದು ಬಾಯ್ತೆರೆದು ನೀರಲ್ಲಿ ನಿರೀಕ್ಷಿಸುತ್ತಿದೆ. ತಾನು ಬಂದ ಕುದುರೆಯಿಂದ ಬೇರ್ಪಡೆಯಾಗಿದ್ದು ಮರದ ಕೊಂಬೆ ಹಿಡಿದು ಅರ್ಜುನನು ನೇತಾಡುತ್ತಿದ್ದಾನೆ. ಅತ್ತ ಮೇಲಕ್ಕೇರಲು ಸಾಧ್ಯವಿಲ್ಲ, ಇತ್ತ ಕೆಳಕ್ಕೂ ಬರಲು ಸಾಧ್ಯವಿಲ್ಲವಾಗಿ ನನ್ನನ್ನು ಸಂರಕ್ಷಿಸು ಎಂದು ಪ್ರಾರ್ಥಿಸುವ ಅರ್ಜುನನ ಮನಃಸ್ಥಿತಿ ಕಾಣಬಹುದಾದ ಚಿತ್ರವಿದು. ಇದಲ್ಲದೇ ಶಬರಿಯ ಭಕ್ತಿ, ಭಗವಾನ್ ಬುದ್ಧ, ಸೀತಾಪಹರಣ, ಕಂಸನ ಕ್ರೌರ್ಯ, ಅಹಲ್ಯಾ ಶಾಪ, ಪರಶುರಾಮನ ಪ್ರಚಂಡ ಶಕ್ತಿ ಮುಂತಾದವು ಪೌರಾಣಿಕ ಕಥಾ ರೂಪಗಳಿಗೆ ಚಿತ್ರಿಸಿದವುಗಳಾಗಿವೆ.

This picture was painted at the World Kannada Conference held at Mysore. This is under the possession of Department of Kannada and Culture. Even in this a crocodile has opened its mouth, desiring to swallow Arjuna who is swinging on a tree branch after being dismounted from his horse. Arjuna is unable to move either upwards or downwards, helplessly praying Krishna for rescue. Other than this Sabari, Bhagavan Buddha, Abduction of Seeta, Cruelty of Kamsa, Ahalya's curse, Powerful Parashu Rama etc, are painted with gusto having epic values.

